

# ಚಂದಮಾಮ

## ಫೆಬ್ರವರಿ 1979



## ಈ ಸಂಚಿಕೆಯಲ್ಲಿ


| | | | |
|---|---|---|---|
| ಪ್ರಶ್ನೋತ್ತರಗಳು ... | ೬ | ಧ್ರುವ ... | ೩೭ |
| ಲಬ್ಧಪ್ರಣಾಶ ... | ೭ | ವಿದೂಷಕನ ಪ್ರಶ್ನೆ ... | ೩೯ |
| ಕರಡಿ ಕೆಂಗಣ್ಣ ... | ೧೧ | ಮಂತ್ರದ ನಿಂಬೆ ... | ೪೦ |
| ಆರಣ್ಯಕ ... | ೧೯ | ಗುಡಿಯಲ್ಲಿ ಮದುವೆ ... | ೪೩ |
| ಅಗಸ್ತ್ಯ ... | ೨೫ | ದೊಡ್ಡವನ ದೊಡ್ಡತನ ... | ೪೪ |
| ತನ್ನ ಮೇಲೆ ಬಂದಾಗ ... | ೨೭ | ಅನಾಗರಿಕ...? ... | ೪೭ |
| ಯಮದರ್ಶನ ... | ೨೮ | ದೇವೀಭಾಗವತ ... | ೫೧ |
| ಬಲಿಯ ಭಂಗ ... | ೩೩ | ನಗರದಲ್ಲಿ ಉದ್ಯೋಗ ... | ೫೯ |





ಬಿಡಿ ಪ್ರತಿ ರೂ. ೧-೨೫ ವಾರ್ಷಿಕ ಚಂದಾ ರೂ. ೧೫.೦೦

# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

---

ಈ ಸಂಚಿಕೆಯಲ್ಲಿ ಪುರಾಣ ಬಾಲರ ಕಥೆಗಳಲ್ಲಿ 'ಧ್ರುವ'ನ ಕಥೆ ಪ್ರಕಟವಾಗಿದೆ. ಮಹಾವೀರನಾಗಿ ಖ್ಯಾತಿ ಗಳಿಸಿದ ಧ್ರುವನು ಬಾಲ್ಯ ಪ್ರಾಯದಲ್ಲಿಯೇ ಸ್ವಾಭಿಮಾನ ಸಂಪನ್ನನಾಗಿದ್ದನೆಂಬುದು ತಂದೆಯ ತೊಡೆಯಲ್ಲಿ ಕೂಡಲಾಗದೆ ಹೋದಾಗ, ಅವನ ಕ್ಷಾತ್ರರಕ್ತ ತಪಸ್ಸಿಗೆ ಹೋಗುವಷ್ಟು ಧೃಢವಾಗಿದ್ದುದನ್ನು ನೋಡಿದರೆ ಗೊತ್ತಾಗುತ್ತದೆ. ಜನ್ಮತಃ ವೀರರಿಗೇ ಅಂತಹ ಧೃಢ ಮನಸ್ಸು. ಅದನ್ನನುಸರಿಸಿಯೇ ಧ್ಯೇಯ ಸಾಧನೆ.

## ಅಮರವಾಣಿ

ಗುರುಲಾಘವ ಮರ್ಥಾನಾಂ
ಆರಂಭೇ ಕರ್ಮಣಾಂ ಫಲಂ
ದೋಷಂ ವಾ ಯೋ ನ ಜಾನಾತಿ
ಸ ಬಾಲ ಇತಿ ಹೋಚ್ಯತೇ ೧.

[ಯಾವನು ಕೆಲಸ ಪ್ರಾರಂಭಿಸುವಾಗ ಅದರ ಹೆಚ್ಚು ಕಡಿಮೆಗಳನ್ನೂ ಒಳಿತು ಕೆಡುಕುಗಳನ್ನೂ ತಿಳಿದುಕೊಳ್ಳಲಾರನೋ ಅವನನ್ನು ಮೂಢನೆನ್ನುತ್ತಾರೆ.!

---

ಸಂಪುಟ: ೭ ಫೆಬ್ರವರಿ '೫೬ ಸಂಚಿಕೆ: ೨

ಬಿಡಿ ಪ್ರತಿ ರೂ. ೧-೩೫ :: ವಾರ್ಷಿಕ ಚಂದಾ ರೂ. ೧೫-೦೦






**ಆಯಿತಾ ಸತ್ಯನಾರಾಯಣ, ಸೂಳೂರುಪೇಟೆ (ಆಂಧ್ರ)**

**ಪ್ರ: ಮಳೆ ಹೇಗೆ ಬರುತ್ತದೆ? ಮಳೆಯ ನೀರು ಆಕಾಶದಲ್ಲಿ ಹೇಗೆ ನಿಂತಿರುತ್ತದೆ? ಸ್ವಲ್ಪ ಹಿಂದೆ ಮುಂದೆಯಾದರೂ ಆಯಾ ತಿಂಗಳುಗಳಲ್ಲೇ ಮಳೆ ಸುರಿಯುವ ಕಾರಣವೇನು? ಆಲಿಕಲ್ಲು ಮಳೆ ಹೇಗೆ ಉಂಟಾಗುತ್ತದೆ?**

ಉ: ಭೂಮಿಯಲ್ಲಿರುವ ಎಲ್ಲಾ ದ್ರವ್ಯಗಳ ರಾಶಿಗಳ ಹಾಗೆ ನೀರು ಕೂಡಾ ಭೂಮಿಯ ಆಕರ್ಷಣ ಶಕ್ತಿಯಿಂದಾಗಿ ಭೂಮಿಯನ್ನು ಅಂಟಿಕೊಂಡಿರುತ್ತದೆ. ಅದು ಕಾಯುವಾಗ ಆವಿಯ ರೂಪ ಪಡೆಯುವ ಸಂಗತಿ ನಮಗೆ ಗೊತ್ತು. ಬಿಸಿ ಏರಿದಂತೆ ನೀರಿನ ಅಣುಚಲನ ಶಕ್ತಿ ಹೆಚ್ಚಾಗುತ್ತದೆ. ಕಾಯಿಸದೆಯೇ ನೀರು ಆವಿಯಾಗುವುದೂ ನಮಗೆ ಗೊತ್ತು. ಒದ್ದೆ ಬಟ್ಟೆ ತನ್ನಂತೆ ಆರಿಹೋಗುತ್ತದೆ. ಬಿಂದಿಗೆಯಲ್ಲಿರುವ ನೀರು ಕೆಲವು ದಿನಗಳಲ್ಲಿ ಇಂಗಿ ಆವಿಯಾಗಿ ಮಾರ್ಪಡುತ್ತದೆ. ನೀರಿನ ರೂಪದಲ್ಲಿರುವ ಅಣುಗಳಿಗಿಂತಲೂ ಆವಿಯ ರೂಪದ ಅಣುಗಳಿಗೆ ಹೆಚ್ಚು ವೇಗವಿರುತ್ತದೆ. (ಭೂಮಿಯ ಆಕರ್ಷಣ ಶಕ್ತಿಯಿಂದ ತಪ್ಪಿಸಿಕೊಂಡು ವಿಶಾಲಾಕಾಶಕ್ಕೆ ಹೋಗಲು ಬೇಕಾಗುವ ವೇಗವನ್ನು "ಪಲಾಯನ ವೇಗ" ಎನ್ನುವರು. ನೀರಿನ ಅಣುಗಳು ಕೂಡಾ ಯಾವ ಕಾರಣದಿಂದಾದರೂ ಪಲಾಯನ ವೇಗವನ್ನು ಮುಟ್ಟಿಬಿಟ್ಟರೆ ಅವು ಭೂಮಿಯಿಂದ ತಪ್ಪಿಸಿಕೊಂಡು ಹೋಗುತ್ತವೆ. ಚಂದ್ರನ ಮೇಲೆ ಪಲಾಯನ ವೇಗವು ಬಹಳ ಕಡಮೆ. ಏಕೆಂದರೆ, ಚಂದ್ರಗೋಳದ ಮೇಲಿರುವ ಆಕರ್ಷಣ ಶಕ್ತಿ, ಭೂಮಿಗೆ ಹೋಲಿಸಿದರೆ, ಐದನೇ ಒಂದು ಭಾಗ ಮಾತ್ರ. ಆದುದರಿಂದ ಒಂದು ಕಾಲದಲ್ಲಿ ಚಂದ್ರನ ಮೇಲೆ ನೀರು ಇದ್ದರೂ ಅದು ಯಾವಾಗಲೋ ಚಂದ್ರನನ್ನು ಬಿಟ್ಟು ಹೊರಟು ಹೋಗಿರಬೇಕು.)

ಆವಿಯ ರೂಪವಾದ ನೀರು ಆಕಾಶಕ್ಕೆ ಹೋಗಿ ಧೂಳೀ ಕಣಗಳೊಂದಿಗೆ ಸೇರಿ ಮೇಘದ ರೂಪ ತಾಳುತ್ತದೆ. ಕಬ್ಬಿಣದ ದೋಣಿ ನೀರಿನಲ್ಲಿ ತೇಲುವ ಹಾಗೆ, ಸಂಕೋಚಿಸಿಕೊಂಡ ನೀರಿನ ಕಣಸಮುದಾಯವು (ಮೇಘ) ಗಾಳಿಯಲ್ಲಿ ತೇಲುವುದು ಮಾತ್ರವಲ್ಲ, ಗಾಳಿಯೊಂದಿಗೆ ಅಟ್ಟಿಸಲ್ಪಟ್ಟೂ, ಹೋಗುತ್ತದೆ. ಋತು ಪವನಗಳು ಅವುಗಳನ್ನು ವಿವಿಧ ಪ್ರಾಂತಗಳಿಗೆ ಸೇರಿಸುತ್ತವೆ. ಬೆಟ್ಟಗಳು ಅಡ್ಡ ಬಂದು ಮೇಘಗಳು ಮತ್ತಿಷ್ಟು ಮೇಲಕ್ಕೆ ಏರಿದರೂ ಯಾವ ಕಾರಣದಿಂದಲಾದರೂ ಮೇಘಗಳಿರುವ ವಾತಾವರಣವು ಆಕಸ್ಮಾತ್ತಾಗಿ ತಣ್ಣಗಾದರೂ, ಮೇಘದೊಳಗಿನ ನೀರಿನ ಆವಿ ನೀರಾಗಿ ಕೂಡಿಕೊಂಡು ಮಳೆಯಾಗಿ ಸುರಿಯುತ್ತದೆ. ಆಕಸ್ಮಿಕವಾಗಿ ತಣ್ಣಗಾಗಿಬಿಟ್ಟರೆ ನೀರಿನ ಆವಿ ಆಲಿಕಲ್ಲುಗಳ ರೂಪ ಧರಿಸುತ್ತದೆ.

ನಿಮ್ಮ ಪ್ರಾಂತದಲ್ಲಿ ಅಕ್ಟೋಬರ್, ನವಂಬರ್ ತಿಂಗಳು ಮಳೆಗಾಲವಾದರೆ ಪ್ರಪಂಚದಲ್ಲೆಲ್ಲಾ ಹಾಗಿರುವುದಿಲ್ಲ. ಮೊತ್ತಮೊದಲು ೬, ೭ ಸಾವಿರ ವರ್ಷಗಳ ಕೆಳಗೆ ರಾಶಿಚಕ್ರವನ್ನು ನಿರ್ಣಯಿಸಿದ ಸುಮೇರಿಯನ್ನರು ಮಕರ, ಕುಂಭ, ಮೀನ ರಾಶಿಗಳನ್ನು ಜಲ ರಾಶಿಗಳೆಂದರು. ಏಕೆಂದರೆ ಆ ಕಾಲದಲ್ಲಿ ಸೂರ್ಯನು ಆ ರಾಶಿಗಳಲ್ಲಿರುವಾಗ ಅಲ್ಲಿ ಮಳೆಗಾಲ.

ಅಂದ ಹಾಗೆ ೧೪೦೦ ವರ್ಷಗಳ ಕೆಳಗೆ ಕಾಳಿದಾಸನು ಮೇಘವನ್ನು "ಧೂಮಜ್ಯೋತಿ ಸಲಿಲಮರುತಾಂ ಸನ್ನಿಪಾತಃ" ಎಂದು ಸರಿಯಾಗಿ ವರ್ಣಿಸಿದ್ದಾನೆ ಅಲ್ಲವೆ?




೬೨

### ಕೃತಘ್ನಳ ಕಥೆ

ಒಂದಾನೊಂದು ನಗರದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ತನ್ನ ಹೆಂಡತಿಯ ಮೇಲೆ ಅತ್ಯಂತ ಪ್ರೇಮವಿದ್ದಿತು. ಅವಳಿಗಾಗಿ ಏನು ಬೇಕಾದರೂ ಮಾಡುವಷ್ಟು ಮಮಕಾರದಲ್ಲಿದ್ದನು. ಆದರೆ ಅವಳಿಗೆ ಅವನ ಮೇಲೆ ಯಾವಾಗಲೂ ಬೇಸರವೇ, ಸಿಟ್ಟೇ, ಸಿಡುಸಿಡುಕೇ. ಅಷ್ಟುಮಾತ್ರವಲ್ಲದೆ ಗಂಡನ ಕಡೆಯ ಮನುಷ್ಯರೊಂದಿಗೂ ಏನಾದರೂ ಜಗಳ ಕಾದು ಕೊಂಡಿರುವಳು. ಈ ಕಾಟವನ್ನು ಸಹಿಸಲಾರದೆ ತನ್ನವರಾರೂ ಇಲ್ಲದ ಊರಿಗೆ ಹೋದರೆ ಸುಖವಾಗಿರಬಹುದೆಂದು ಬ್ರಾಹ್ಮಣನಿಗೆ ತೋರಿತು. ಆದರಂತೆ ಹೆಂಡತಿಯನ್ನು ಕರಕೊಂಡು ದೂರದ ಊರಿಗೆ ಹೊರಟನು.

ದಾರಿಯಲ್ಲಿ ಒಂದು ಮರುಭೂಮಿಯನ್ನು ದಾಟಬೇಕಾಗಿಬಂತು. ಬಿಸಿಲು ತೀವ್ರವಾಗಿದ್ದುದರಿಂದ ಹೆಂಡತಿಗೆ ತಾಳಲಾರದಷ್ಟು ಬಾಯಾರಿಕೆಯಾಯಿತು. ನೀರಿಲ್ಲದೆ ಕದಲಲಾರೆನೆಂದು ಗೋಳಿಟ್ಟಳು. ಬಾಹ್ಮಣನು ನೀರು ತರಲು ಬಹಳ ದೂರ ಹೋದನು. ಅವನು ನೀರಿನೊಂದಿಗೆ ತಿರುಗಿ ಬಂದು ಹೆಂಡತಿ ಬಿಸಿಲಿನ ಹೊಡೆತದಿಂದ ಸತ್ತುಹೋಗಿರುವುದನ್ನು ನೋಡಿದನು. ಅವಳ ಮೇಲೆ ಅಪಾರ ಪ್ರೇಮ ಉಳ್ಳವನಾದುದರಿಂದ, ಅವನು ಗಟ್ಟಿಯಾಗಿ ರೋದಿಸುತ್ತಾ, ಇವಳನ್ನು ಬದಕಿಸುವಂತೆ ದೇವರನ್ನು ನಾನಾವಿಧವಾಗಿ ಬೇಡುತ್ತಾ ನರಳ ತೊಡಗಿದನು.

ಆಗ ಹೀಗೆ ಆಕಾಶವಾಣಿ ಕೇಳಿಸಿತು : "ಬ್ರಾಹ್ಮಣಾ, ನಿನ್ನ ಆಯುಷ್ಯದಲ್ಲಿ ಅರ್ಧವನ್ನು ನಿನ್ನ ಹೆಂಡತಿಗೆ ಧಾರೆಯೆರೆದು ಕೊಟ್ಟರೆ ಅವಳು ಮತ್ತೆ ಬದುಕಿ ಅಷ್ಟರವರೆಗೆ ಜೀವಿಸುತ್ತಾಳೆ"

ಬ್ರಾಹ್ಮಣನು ಅದಕ್ಕೆ ಸಂತೋಷವಾಗಿ ಒಪ್ಪಿಕೊಂಡು "ನನ್ನ ಜೀವಿತದ ಅರ್ಧ ಆಯುಷ್ಯವನ್ನು ಇವಳಿಗೆ ಕೊಡುತ್ತೇನೆ" ಎಂದು ಸಂಕಲ್ಪಪೂರ್ವಕ ಧಾರೆಯೆರೆದು ಕೊಟ್ಟನು.

ಆ ಕೂಡಲೇ ಅವಳು ನಿದ್ದೆಯಿಂದ ಎದ್ದವಳಂತೆ ಎದ್ದು, ಗಂಡನು ಕೊಟ್ಟ ನೀರನ್ನು ಕುಡಿದು, ತಮ್ಮೊಂದಿಗೆ ತಂದಿದ್ದ ಆಹಾರವನ್ನು ಗಂಡನೊಂದಿಗೆ ತಾನೂ ತಿಂದಳು. ಆಗ ಅವಳು ಸತ್ತು ಬದುಕಿದ



ಸಂಗತಿಯನ್ನು ಬ್ರಾಹ್ಮಣನು ಅವಳಿಗೆ ತಿಳಿಸಿದನು. ಕಡೆಗೆ ಅವರು ಒಂದು ನಗರದ ಹೊರಗಿನ ಹೂವಿನ ತೋಟವನ್ನು ತಲಪಿದರು. ಅಲ್ಲಿ ಗಂಡನು ಹೆಂಡತಿಯೊಂದಿಗೆ, "ನೀನು ಇಲ್ಲಿಯೇ ಕುಳಿತಿರು. ನಾನು ಊರೊಳಗೆ ಹೋಗಿ ನಮ್ಮಿಬ್ಬರಿಗೂ ಭೋಜನ ತೆಗೆದುಕೊಂಡು ಬರುತ್ತೇನೆ" ಎಂದು ಹೇಳಿ ಹೊರಟುಹೋದನು.

ಅವಳು ತೋಟದಲ್ಲಿ ಕುಳಿತುಕೊಂಡಿದ್ದಾಗ, ಒಬ್ಬ ಕುಂಟನು ಇಂಪಾಗಿ ಹಾಡುತ್ತ ತೆವಳಿಕೊಂಡು ಅಲ್ಲಿಗೆ ಬಂದನು. ಅವನ ಹಾಡನ್ನು ಕೇಳಿ ಅವಳು ಮೋಹ ಪರವಶಳಾಗಿ, ಅವನನ್ನು ಕರೆದು, "ನೀನು ನನ್ನ ಪ್ರಿಯನಾಗಿ ನನ್ನೊಂದಿಗೆ ಇರಬೇಕು" ಎಂದು ಒತ್ತಾಯಿಸಿದಳು. ಇಲ್ಲದಿದ್ದರೆ ತಾನು ಆತ್ಮಹತ್ಯ ಮಾಡಿಕೊಳ್ಳುವೆನೆಂದೂ ಹೇಳಿದಳು.

"ನಾನೊಬ್ಬ ಕಾಲಿಲ್ಲದ ಕುಂಟ. ನಿನಗೆ ನನ್ನೊಂದಿಗೆ ಸರಸ ಚೆಂದವೇ?" ಎಂದು ಕುಂಟನು ಹಿಂಜರಿದನು. "ಕುಂಟನಾದರೆ ಏನಾಯಿತು?" ಎಂದು ಅವಳು ಪಟ್ಟುಹಿಡಿದಾಗ, ಅವನು ಅವಳ ಪ್ರೇಮಿಯಾದನು.

ಬ್ರಾಹ್ಮಣನು ಭೋಜನವನ್ನು ತೆಗೆದುಕೊಂಡು ಬಂದು ತನ್ನೊಂದಿಗೆ ಉಣ್ಣುವಂತೆ ಅವಳನ್ನು ಕರೆದನು. ಆಗ ಅವಳು, "ಪಾಪ, ಈ ಕುಂಟನಿಗೂ ಸ್ವಲ್ಪ ಕೊಡಬೇಕು. ಇವನಿಗೆ ತುಂಬಾ ಹಸಿವೆಯಂತೆ" ಎಂದು ಹೇಳಿದಳು. "ಕೊಡೋಣ, ಅದಕ್ಕೇನು?" ಎಂದು ಬ್ರಾಹ್ಮಣನು ಒಪ್ಪಿದನು. ಮೂವರೂ ಭೋಜನಮಾಡಿ ಮುಗಿಸಿದ ಮೇಲೆ ಬ್ರಾಹ್ಮಣನ ಹೆಂಡತಿ ಗಂಡನೊಂದಿಗೆ, "ನಮಗಂತೂ ಮಕ್ಕಳಿಲ್ಲ. ನೀವು ಹೊರಗೆ ಹೋಗಿಬಿಟ್ಟರೆ ನಾನೊಬ್ಬಳೇ ಮನೆಯಲ್ಲಿರಬೇಕಾಗುತ್ತೆ. ನನಗೂ ತಲೆಶೂಲಿ, ಕಾಲುನೋವು ಬಂದರೆ ಕೆಲಸಮಾಡಲಿಕ್ಕೂ ಯಾರಿಲ್ಲ. ಆದ್ದರಿಂದ ಈ ಕುಂಟನನ್ನೂ ನಮ್ಮೊಂದಿಗೆ ಕರೆದುಕೊಂಡು ಹೋಗೋಣ, ಆಗದೆ?" ಎಂದಳು ಗಂಡನೊಂದಿಗೆ.

ಅದಕ್ಕೆ ಬ್ರಾಹ್ಮಣನು "ಈ ಕುಂಟನು ನಮ್ಮೊಂದಿಗೆ ನಡೆಯಲಾರ. ಇವನನ್ನು ಹೊರುವುದು ಯಾರು? ನಾನೆಲ್ಲಿ ಹೊತ್ತೇನು?" ಎಂದನು.

"ಒಂದು ಹೆಡಿಗೆ ತನ್ನಿ. ಅದರಲ್ಲಿ ಇವನನ್ನು ಕುಳ್ಳಿರಿಸಿ ನಾನೇ ಹೊರುತ್ತೇನೆ" ಎಂದಳು ಹೆಂಡತಿ.

ಬುದ್ಧಿಯಿಲ್ಲದ ಬ್ರಾಹ್ಮಣ ಹೆಂಡತಿಯ ಮೇಲಿನ ಮೋಹಾತಿರೇಕದಿಂದ ಇಂತಹ ಅನರ್ಥಕರವಾದ ಏರ್ಪಾಡಿಗೆ ಸಮ್ಮತಿಸಿ ಒಂದು ಹೆಡಿಗೆ ತಂದ. ಅದರಲ್ಲಿ ಕುಂಟನನ್ನು ಕೂಡಿಸಿ ಅವಳು ಹೊತ್ತಳು.

ದಾರಿಯಲ್ಲಿ ಅವರಿಗೆ ಒಂದು ಬಾವಿ ಸಿಕ್ಕಿತು. ಆ ಬಾವಿಯ ದಂಡೆಯ ಮೇಲೆ ಅವರು ವಿಶ್ರಾಂತಿಗಾಗಿ ಕುಳಿತರು. ಆಗ ಬ್ರಾಹ್ಮಣನ ಹೆಂಡತಿ ಕುಂಟನ ಸಹಾಯದಿಂದ ಬ್ರಾಹ್ಮಣನನ್ನು ಅಕಸ್ಮಾತ್ತಾಗಿ ಬಾವಿಯೊಳಗೆ ದೂಡಿಬಿಟ್ಟಳು. ತರುವಾಯ ಅವಳು ಕುಂಟನನ್ನು ಹೆಡಿಗೆಯಲ್ಲಿ ಕೂಡಿಸಿ ತಲೆಯ ಮೇಲಿಟ್ಟು

ಕೊಂಡು ಹೊರಟಳು. ಬಹಳ ಸಂತೋಷದಿಂದ ಹೋಗುತ್ತಾ ಅವರಿಬ್ಬರೂ ಒಬ್ಬ ಧರ್ಮಾತ್ಮನು ಪಾಲಿಸುವ ನಗರವನ್ನು ತಲಪಿದರು. ಅಲ್ಲಿಯ ರಕ್ಷಕ ಭಟರು ಅವಳ ತಲೆಯಲ್ಲಿರುವ ಹೆಡಿಗೆಯನ್ನೂ ಅದರಲ್ಲಿರುವ ಕುಂಟನನ್ನೂ ನೋಡಿ ಆಶ್ಚರ್ಯಪಟ್ಟು, ಅವಳನ್ನು ತಮ್ಮ ರಾಜನ ಬಳಿಗೆ ಕರೆದುಕೊಂಡು ಹೋದರು.

ರಾಜನು ಅವಳನ್ನು ನೋಡಿ, "ಯಾರು ನೀನು? ಏನಿದು?" ಎಂದು ವಿಚಾರಿಸಿದನು. ಆಗ ಅವಳು ರಾಜನೊಂದಿಗೆ, "ಮಹಾಪ್ರಭುಗಳೇ! ಇವರು ನನ್ನ ಗಂಡ. ಇವರ ಬಂಧುಗಳು ಇವರನ್ನು ನಾನಾ ವಿಧವಾಗಿ ಹಿಂಸಿಸಿ ಕುಂಟುಗೊಳಿಸಿದರು. ಕಡೆಗೆ ಕೊಲ್ಲಲಿಕ್ಕೆ ಕೂಡಾ ಸಿದ್ಧರಾದಾಗ, ನಾನು ಯಾರಿಗೂ ತಿಳಿಯದಂತೆ ಇವರನ್ನು ಹೆಡಿಗೆಯಲ್ಲಿಟ್ಟು ಹೊತ್ತುಕೊಂಡು ಈ ನಗರಕ್ಕೆ ಬಂದೆನು" ಎಂದಳು.

"ಆಹಾ! ನಿನ್ನಂಥ ಮಹಾಪತಿವ್ರತೆಯನ್ನು ನಾನೆಲ್ಲಯೂ ನೋಡಿಲ್ಲ. ನಿನಗೆ ಎರಡು ಗ್ರಾಮಗಳನ್ನು ಇನಾಮಾಗಿ ಕೊಡುತ್ತೇನೆ" ಎಂದನು ರಾಜ. ಅವಳು ತುಂಬಾ ಸಂತೋಷಪಟ್ಟು ಅಲ್ಲಿಂದ ಹೊರಡಲಿರುವಾಗ, ಅವಳ ಗಂಡನಾದ ಬ್ರಾಹ್ಮಣನು ಅಲ್ಲಿಗೆ ಬಂದುಬಿಟ್ಟನು. ಬಾವಿಯಲ್ಲಿ ಬಿದ್ದ ಅವನ ಕೂಗನ್ನು ಕೇಳಿ ಯಾರೋ ಒಬ್ಬ ಸನ್ಯಾಸಿ ಅವನನ್ನು ಎತ್ತಿ ಕಾಪಾಡಿದ್ದನು.

ಗಂಡನು ಸಮೀಪ ಬರುವುದನ್ನು ನೋಡಿ ಅವಳು ರಾಜನೊಂದಿಗೆ, "ಅಯ್ಯಯ್ಯೋ! ಅಲ್ಲಿ ಬರುತ್ತಿರುವವನು ನನ್ನ ಗಂಡನಿಗೆ ಪ್ರಬಲ ಶತ್ರು! ಇಲ್ಲಿಗೂ ಬೆನ್ನಟ್ಟಿ ಬಂದನಲ್ಲಾ!" ಎಂದಳು ಗಾಬರಿಯಿಂದ.

"ಹೆದರಬೇಡ" ಎಂದು ರಾಜನು ಅವಳಿಗೆ ಅಭಯವಿತ್ತು, "ಅವನನ್ನು ಕೊಲ್ಲಿರಿ!" ಎಂದು ಭಟರಿಗೆ ಆಜ್ಞೆ ಮಾಡಿದನು.

ಕೂಡಲೇ ಬ್ರಾಹ್ಮಣನು ರಾಜನೊಂದಿಗೆ, "ಮಹಾರಾಜರೇ, ನನ್ನನ್ನು ಕೊಲ್ಲುವುದಕ್ಕೆ ಮೊದಲು ಆ ಹೆಂಗಸು ನನಗೆ ಕೊಡಬೇಕಾದ್ದನ್ನೆಲ್ಲಾ ಕೊಟ್ಟುಬಿಡಲು ಹೇಳಬೇಕು!" ಎಂದನು.



ರಾಜನು ಕುತೂಹಲದಿಂದ ಅವಳನ್ನು ನೋಡಿ, "ಇವನು ನಿನಗೆ ಏನನ್ನು ಕೊಟ್ಟ?" ಎಂದು ಕೇಳಿದನು.

"ನನಗೇನೂ ಕೊಡಲಿಲ್ಲ" ಎಂದಳು ಅವಳು. ಆಗ ಬ್ರಾಹ್ಮಣನು, "ಏನೇ. ನೀನು ಮರುಭೂಮಿಯಲ್ಲಿ ಸತ್ತುಹೋದಾಗ ನನ್ನ ಆಯುಷ್ಯದಲ್ಲಿ ಅರ್ಧಭಾಗವನ್ನು ಧಾರೆಯೆರೆದು ನಿನ್ನನ್ನು ಬದುಕಿಸಿದ್ದೇನೆಂದು ಹೇಳಿದ್ದೇನಲ್ಲಾ? ಮರತೆಯಾ?" ಎಂದು ಹೇಳಿ, ರಾಜನನ್ನು ನೋಡಿ, "ಮಹಾಪ್ರಭುಗಳೇ, ಇವಳಿಗಾಗಿ ನಾನು ನನ್ನ ಬಂಧುಗಳನ್ನೆಲ್ಲಾ ಬಿಟ್ಟೆನು. ನನ್ನ ಆಯುಷ್ಯದಲ್ಲಿ ಅರ್ಧವನ್ನು ಧಾರೆಯೆರೆದನು. ಇವಳನ್ನು ಅಗ್ನಿ ಸಾಕ್ಷಿಯಾಗಿ ಮದುವೆಯಾದವನು ನಾನು. ಇವಳು ನನಗೆ ಕೃತಘ್ನಳಾಗಿ. ಈ ಕುಂಟನ ಪ್ರೇಮಕ್ಕೆ ಜೋತುಬಿದ್ದು ತಮ್ಮಿಂದ ನನ್ನನ್ನು ಕೊಲ್ಲಿಸಲು ನೋಡುತ್ತಾಳೆ." ಎಂದನು.

ರಾಜನು ಕಠಿನವಾಗಿ ಪ್ರಶ್ನಿಸಿದ ಮೇಲೆ ಅವಳೂ ಕುಂಟನೂ ನಿಜಸಂಗತಿ ಕಕ್ಕಿದರು. ರಾಜನು ಬಲಾತ್ಕಾರವಾಗಿ ಅವಳಿಂದ ಬ್ರಾಹ್ಮಣನ ಅರ್ಧಾಯುಷ್ಯವನ್ನು ಧಾರೆಯೆರೆಸಿ ಹಿಂದಿರುಗಿಸುವಂತೆ ಮಾಡಿದನು. "ನಾನು ನನ್ನ ಗಂಡನಿಂದ ಸಾಲವಾಗಿ ಪಡೆದ ಆಯುಷ್ಯವನ್ನು ಅವರಿಗೇ ತಿರುಗಿ ಕೊಡುತ್ತೇನೆ" ಎಂದು ಅವಳು ನೀರು ಬಿಟ್ಟು ಸತ್ತು ಬಿದ್ದಳು.

ಹೀಗೆ ಕೋತಿ ಮೊಸಳೆಗೆ ಕೃತಘ್ನಳ ಕಥೆಯನ್ನು ಹೇಳಿ, "ಎಲೋ ಮೂರ್ಖನೂ ಕಳ್ಳಬುದ್ಧಿಯವನೂ ಆದ ಮೊಸಳೆಯೇ! ಅತಿಯಾಗಿ ಮಾತಾಡುವ ಗಿಣಿಗಳನ್ನು ಪಂಜರಗಳಲ್ಲಿ ಬಂಧಿಸುತ್ತಾರೆ. ಆದರೆ ಮಿತಭಾಷಿಗಳಾದ ಕೊಕ್ಕರೆಯಂಥವನ್ನು ಸ್ವೇಚ್ಛೆಯಾಗಿ ತಿರುಗಲು ಬಿಡುತ್ತಾರೆ. ಮಹಾ ಮೋಸಗಾರನಾದ ನೀನು ಇನ್ನೇನೂ ಮಾತಾಡಬೇಡ. ಇರುವ ಮರ್ಯಾದೆ ಕಾಪಾಡಿಕೊಂಡು ಇಲ್ಲಿಂದ ಹೋಗಿಬಿಡು. ಇಲ್ಲದಿದ್ದರೆ ನಿನ್ನನ್ನು ಬಲವಂತದಿಂದ ದೂಡಬೇಕಾಗಿ ಬರುತ್ತೆ." ಎಂದಿತು.

ಅದಕ್ಕೆ ಮೊಸಳೆ, "ಕೋತ್ಯಪ್ಪಾ, ನನ್ನ ಹಾಸ್ಯವನ್ನು ನೀನು ಅಪಾರ್ಥ ಮಾಡಿಕೊಂಡಿರುವಿ. ನಾನು ವಿಶ್ವಾಸ ಪಾತ್ರನೆಂದೇ ನಂಬು. ಎಂದಿಗೂ ನಿನಗೆ ದ್ರೋಹ ಮಾಡಲಾರೆನೆಂದು ನಂಬಪ್ಪಾ!" ಎಂದಿತು.

"ಎಲೋ ಹೆಂಡತಿಯ ದಾಸನೇ! ನಿನ್ನಂಥವರು ಹೆಂಡತಿ ಹೇಳಿದ್ದಕ್ಕೆಲ್ಲಾ ತಲೆಯಾಡಿಸಿ ತಮ್ಮ ಕ್ಷೇಮವನ್ನೂ, ಐಶ್ವರ್ಯವನ್ನೂ, ಸ್ನೇಹಿತರನ್ನೂ ತ್ಯಾಗ ಮಾಡುತ್ತಾರೆ. ನಂದ ಮತ್ತು ವರರುಚಿಯಂಥವರೇ ಹೆಂಡತಿಯರ ದಾಸರಾದರೆಂದರೆ ನೀನೊಂದು ಲೆಕ್ಕವೇ?" ಎಂದಿತು ಕೋತಿ.

"ಅದೇನು ಕಥೆಯೋ?" ಎಂದು ಮೊಸಳೆ ಕೇಳಲು ಕೋತಿ ಅದನ್ನೂ ಹೇಳತೊಡಗಿತು:





# ಅರಣ್ಯಕ

ಥಟ್ಟನೆ ಹೆಗಲಿನಿಂದ ಹಾರಿ ಓಡಿದ ಬೇತಾಳದ ಹಿಂದೆಯೇ ಹಟಗಾರನಾದ ತ್ರಿವಿಕ್ರಮ ರಾಜನೂ ಹೋಗಿ, ಮರದ ಕೊಂಬೆಯಲ್ಲಿ ನೇತಾಡುತಿದ್ದ ಶವವನ್ನು ಕೆಳಗಿಳಿಸಿ, ತನ ಹೆಗಲ ಮೇಲೆ ಏರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆದನು. ಆಗ ಶವದೊಳಗೆ ಹುದುಗಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನೀನು ರಾಜಕೀಯಗಳನ್ನೆಲ್ಲ ಬಿಟ್ಟು ಕಾಡಿನೊಳಗೆ ಶ್ರಮ ಪಡುತ್ತಿರುವುದನ್ನು ನೋಡುವಾಗ, ಹಿಂದೆ ಅರಣ್ಯಕನೆಂಬ ಆಟವಿಕನು ರಾಜಕೀಯದಲ್ಲಿ ಬಿದ್ದ ಸಮಾಚಾರ ನೆನಪಿಗೆ ಬರುತ್ತದೆ. ದಾರಿಯ ಕಷ್ಟ ತಿಳಿಯದ ಹಾಗೆ ನಿನಗೆ ಅವನ ಕಥೆ ಹೇಳುತ್ತೇನೆ, ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಿಸಿತು :

ಚಂದ್ರಗಿರಿಯ ರಾಜನಾದ ಅಮರಪಾಲನೆಂದರೆ ಎಂತೆಂತಹ ರಾಜರಿಗೆಲ್ಲಾ ಸಿಂಹ ಸ್ವಪ್ನನಾಗಿದ್ದನು. ಅವನೊಂದಿಗೆ ಯುದ್ಧ ಮಾಡಿ ಸೋಲದ ರಾಜನೇ ಇರಲಿಲ್ಲ. ಆದುದರಿಂದ ಅವನಿಗೆ ತಿರುಗಿ ನಿಲ್ಲಲು ಯಾರಿಗೂ ಧೈರ್ಯವಿಲ್ಲ, ಅವನು ಹಾಗೆ ಅಜೇಯನಾಗಿರಲು ಕಾರಣವೇನೆಂದರೆ ಅವನ ಸೇನೆಯಲ್ಲಿರುವ

## ಬೇತಾಳ ಕಥೆಗಳು



ಆಟವಿಕ ಸೈನಿಕರೇ, ಆಟವಿಕ ಸೈನಿಕರ ಬಲಪರಾಕ್ರಮಗಳಿಗೆ ಈಡು ಎಣೆ ಇರಲಿಲ್ಲ.

ಚಂದ್ರಗಿರಿ ರಾಜ್ಯದ ಮೇರೆಗಳಲ್ಲಿ ಅಲ್ಲಲ್ಲಿ ಕೀಕಾರಣ್ಯಗಳಿದ್ದುವು. ಅಲ್ಲಿರುವವರೆಲ್ಲ ಆಟವಿಕರೇ. ಅವರಿಗೆಲ್ಲ ಒಬ್ಬ ನಾಯಕನಿದ್ದನು. ಅವನು ಹೇಳಿದಂತೆ ಎಲ್ಲರೂ ರಾಜಭಕ್ತಿಯುಳ್ಳವರು. ಚಂದ್ರಗಿರಿ ರಾಜ್ಯಕ್ಕಾಗಿ ಏನು ಮಾಡಬೇಕಾದರೂ ಹಿಂಜರಿಯುವವರಲ್ಲ. ಅಮರಪಾಲ ರಾಜನೊಂದಿಗೆ ಆಟವಿಕ ನಾಯಕನು ತುಂಬ ಅನ್ಯೋನ್ಯವಾಗಿದ್ದನು. ಪ್ರತಿ ವರ್ಷವೂ ಅರಣ್ಯ ಸಂಪತ್ತಿನೊಂದಿಗೆ ತುಂಬ ಚುರುಕಿನವರಾದ ಆಟವಿಕ ಸೈನಿಕರನ್ನು ಕೂಡಾ ಕಳುಹಿಸುತ್ತಿದ್ದನು. ಅವರನ್ನು ಸೇರಿಸಿ ಅಮರಪಾಲನು ತನ್ನ ಸೈನಿಕ ದಳವನ್ನು ನಿಯಮಿಸಿ, ಪರಿಸರಗಳಲ್ಲಿರುವ ಒಂದೊಂದೇ ರಾಜ್ಯವನ್ನು ಪಾದಾಕ್ರಾಂತ ಮಾಡಿಕೊಳ್ಳಲು ಸಮರ್ಥನಾಗಿದ್ದನು. ಅವನ ಮುಖ್ಯ ಬಲ ಆಟವಿಕ ಸೈನಿಕರಾಗಿದ್ದರು. ಸಾಮಂತರಾಜರಿಂದ ನಿಯಮಿತಕಾಲದಲ್ಲಿ ಅಮರಪಾಲನಿಗೆ ಬರುವ ಕಪ್ಪವು ಅಪಾರವಾಗಿತ್ತು.

ಹೀಗೆ ಕಾಲವು ಸಾಗುತ್ತಿರಲು, ಆಟವಿಕ ನಾಯಕನ ಪುತ್ರನಾದ ಅರಣ್ಯಕನು ಬೆಳೆದು ದೊಡ್ಡವನಾದನು. ಅವನು ಪರಿಸ್ಥಿತಿಯನ್ನು ನೋಡಿ, ತಮ್ಮ ಜಾತಿಯವರಿಗೆ ದೊಡ್ಡ ಅನ್ಯಾಯ ನಡೆಯುತ್ತಿದೆಯೆಂದು ಶಂಕಿತನಾದನು. ಪ್ರತಿ ವರ್ಷವೂ ಅಮರಪಾಲ ರಾಜನ ಭಟರು ಬಂದು ಅರಣ್ಯದ ಸಂಪತ್ತನ್ನೂ, ಸೇನೆಯಲ್ಲಿ ಸೇರಲು ಆಟವಿಕ ಯುವಕರನ್ನೂ, ಕಪ್ಪ ಕೊಂಡೊಯ್ಯುವಂತೆ ತೆಗೆದುಕೊಂಡು ಹೋಗುತ್ತಾರಲ್ಲ ? ಏಕೆ ಈ ನಿರ್ಬಂಧ ?

ಅವನು ತಂದೆಯೊಂದಿಗೆ ಒಂದುಸಾರಿ ಈ ವಿಷಯವಾಗಿ ವಾದ ಮಾಡಿದನು. "ನಾವೇಕೆ ಅಮರಪಾಲ ರಾಜನಿಗೆ ಈ ರೀತಿಯಾಗಿ ಕಪ್ಪ ತೆರಬೇಕು ? ನಮ್ಮನ್ನು ಅವನು ಯಾವಾಗ ಗೆದ್ದಿದ್ದಾನೆ ? ನಮ್ಮ ಸಂಪತ್ತನ್ನೂ, ನಮ್ಮ ಯುವಕರನ್ನೂ ಕೊಳ್ಳೆ ಹೊಡೆದು, ನಾವು ದರಿದ್ರರಾಗುವಂತೆಯೂ, ಬಲಹೀನರಾಗುವಂತೆಯೂ ಮಾಡುವ ಅಧಿಕಾರವು ಆ ರಾಜನಿಗೆ ಹೇಗೆ ಬಂತು ?"

ಅರಣ್ಯಕನ ಮಾತಿಗೆ ತಂದೆ ನಗುತ್ತ, "ಹಾಗಾದರೇನಪ್ಪ ? ರಾಜನ ಹತ್ತಿರವಿರುವ ಆಟವಿಕರ ಸೈನ್ಯ ನಮ್ಮದೇ ಅಲ್ಲವೇ ? ರಾಜನು ನಮ್ಮವನಾಗಿರುವಾಗ ನಮ್ಮ ಕಡೆಗೆ ಯಾರಾದರೂ ಕಣ್ಣೆತ್ತಿ ನೋಡಲು ಸಾಧ್ಯವೆ ? ಇದು ನಮಗೆ ಹೆಮ್ಮೆಯ ವಿಷಯವಲ್ಲವೇನೋ ?" ಎಂದನು.

"ನೀನು ತಪ್ಪಾಗಿ ತಿಳಿದಿರುವೆ ಅಪ್ಪಾ. ರಾಜನ ಬಲವು ನಮ್ಮ ಬಲ ಅಲ್ಲವೇ ಅಲ್ಲ. ನಮ್ಮ ಬಲವೇ ರಾಜನ ಬಲ. ನಮ್ಮ ಸೈನಿಕರು ರಾಜನ ಹತ್ತಿರ ಇಲ್ಲದೆ ಹೋದರೆ ರಾಜನು ಇಷ್ಟು ದೇಶಗಳನ್ನು ಜಯಿಸಲು ಸಾಧ್ಯವೇ ? ಇಲ್ಲಿ ನಾವು ಯಾರೂ ಸ್ವತಂತ್ರರಾಗಿಲ್ಲ. ರಾಜನ ಭಟರು ಬಂದು ಕಪ್ಪ

ಕಾಣಿಕೆ ಕೇಳಿದಾಗ ನಾವು ನಿರಾಕರಿಸಿಬಿಟ್ಟರೆ ಆಗ ನಿಜ ಸಂಗತಿ ಗೊತ್ತಾಗುತ್ತದೆ." ಎಂದನು ಆರಣ್ಯಕ.

ಆಟವಿಕ ನಾಯಕನು ಬಹಳ ಹೊತ್ತು ಆಲೋಚನೆ ಮಾಡಿದನು. ಆಮೇಲೆ ಆಟವಿಕರ ಸಭೆಯನ್ನು ಸೇರಿಸಿ, ತಾನು ನಾಯಕ ಪದವಿಯಿಂದ ವಿರಮಿಸಿ, ಇವತ್ತಿನಿಂದ ಆರಣ್ಯಕನನ್ನು ನಾಯಕನನ್ನಾಗಿ ಮಾಡುತ್ತೇನೆಂದು ಘೋಷಿಸಿದನು.

ಇದಾದ ಕೆಲವು ದಿನಗಳ ಮೇಲೆ ಅಮರಪಾಲ ರಾಜನ ಭಟರು ಬಂದು ಪ್ರತಿ ವರ್ಷ ರಾಜನಿಗೆ ಕಳುಹಿಸುವ, ಬಿದಿರಕ್ಕಿ, ಗಂಧದ ಚೆಕ್ಕೆ, ಹುಲಿಚರ್ಮ, ಆನೆಗಳು, ಇಪ್ಪತ್ತು ಮಂದಿ ಆಟವಿಕ ಯುವಕರು, ಜೇನು ಮುಂತಾದುವನ್ನು ಕೊಡಬೇಕೆಂದು ಕೇಳಿದರು,

ಆರಣ್ಯಕನು ಅವರೊಂದಿಗೆ ಸ್ಪಷ್ಟವಾಗಿ ಹೀಗೆಂದನು: "ನಾವು ನಿಮಗೆ ಕಪ್ಪಕಟ್ಟಬೇಕಾದ ಅಗತ್ಯವಿಲ್ಲ. ಚಂದ್ರಗಿರಿರಾಜ್ಯವು ಹೇಗೆ ನಿಮ್ಮದೋ ಹಾಗೆಯೇ ಈ ಅಡವಿರಾಜ್ಯ ನಮ್ಮದು. ನಿಮ್ಮ ಹಾಗೆಯೇ ನಾವು ಕೂಡಾ ಸ್ವತಂತ್ರಜೀವಿಗಳು. ಆದರೆ ನಮ್ಮ ಸೈನಿಕರೆಲ್ಲರೂ ನಿಮ್ಮ ಸೈನ್ಯದಲ್ಲಿ ಸೇರಿರುವ ಕಾರಣದಿಂದ, ನಾವು ಬಹಳ ದುರ್ಬಲರಾಗಿ, ಆತ್ಮರಕ್ಷಣೆ ಕೂಡಾ ಮಾಡಿಕೊಳ್ಳಲಾಗದ ಸ್ಥಿತಿಗೆ ಬಂದಿದ್ದೇವೆ. ಈಗ ನಮಗೆ ಎಚ್ಚರಾಗಿದೆ. ಇನ್ನು ಮೇಲೆ ಈ ಬಗೆಯ ಏರ್ಪಾಟು ಸಾಗಲಾರದು. ಸೈನ್ಯದಲ್ಲಿರುವ ಆಟವಿಕರನ್ನೆಲ್ಲಾ ಹಿಂದಿರುಗಿ ಕಳುಹಿಸಿಬಿಡಬೇಕೆಂದು ನಿಮ್ಮ ರಾಜರೊಂದಿಗೆ ಹೇಳಿರಿ. ಅಡವಿಯಲ್ಲಿರುವ ಸಂಪತ್ತುಗಳೆಲ್ಲಾ ಆಟವಿಕರದು. ರಾಜರಿಗೆ ದಾರಿದ್ರ್ಯವು ಪ್ರಾಪ್ತವಾದರೆ ನಮ್ಮ ಸಂಪತ್ತನ್ನು ಸಹಕಾರವಾಗಿ ಕಳುಹಿಸುತ್ತೇವೆ. ಹಾಗೆಯೇ ನಿಮ್ಮ ರಾಜ್ಯಕ್ಕೆ ಶತ್ರುವಿನ ಭಯವು ಬಂದಾಗ ನಮ್ಮ ಸೈನಿಕದಳವನ್ನೂ ಸಹಾಯವಾಗಿ ಕಳುಹಿಸುತ್ತೇವೆ. ಹೀಗೆ ನಮ್ಮನ್ನು ನಂಬಬಹುದೆಂದು ನಿಮ್ಮ ರಾಜರೊಂದಿಗೆ ಹೇಳಿರಿ."



ರಾಜನ ಭಟರು ಬರಿಗೈಯಲ್ಲಿ ಹಿಂದಿರುಗಿ ಹೊರಟುಹೋದರು. ಮಾರನೇ ದಿನ ಆರಣ್ಯಕನಿಗೆ ಅಮರಪಾಲರಾಜ ನೆಡೆಯಿಂದ ಹೀಗೆಂದು ತಾಖೀದು ಬಂತು: "ಆಟವಿಕರು ಸ್ವತಂತ್ರರೇನೂ ಅಲ್ಲ. ಅಮರಪಾಲನ ಆಳಿಕೆಯೊಳಗೇ ಅವರಿರುವವರು. ಪದ್ಧತಿಯ ಪ್ರಕಾರ ಇನ್ನೆರಡು ದಿನಗಳಲ್ಲಿ ಆಟವಿಕರಿಂದ ಪ್ರತಿ ವರ್ಷ ಬರುವಂತಹದು ಬಾರದೇ ಹೋದ ಪಕ್ಷದಲ್ಲಿ ಸೇನೆಯಲ್ಲಿರುವ ಆಟವಿಕಸೈನಿಕರನ್ನು ಸೆರೆಮನೆಯಲ್ಲಿಟ್ಟು ಅನ್ನಾಹಾರನೀಡದೆ ಕೊಲ್ಲುತ್ತೇವೆ. ಆಟವಿಕಸಂಪತ್ತೆಲ್ಲವೂ ನೆಲಸಮವಾಗುವುದೆಂದು ತಿಳಿಯ ತಕ್ಕದ್ದು. ಎಚ್ಚರ!"

ಈ ತಾಖೀದನ್ನು ಕೇಳಿ ಆರಣ್ಯಕನಿಗೆ ಆಶ್ಚರ್ಯವಾಯಿತು. ಅವನು ರಾಜಭಟರೊಂದಿಗೆ, "ಇದಕ್ಕೆಲ್ಲಾ ನಾವು ಹೆದರಲಾರೆವು. ನಾವು ನಿಮ್ಮ ರಾಜರಿಗೆ ಸಾಮಂತರಾದವರಲ್ಲ. ಮೊದಲು ನಮ್ಮನ್ನು ರಾಜರು ಗೆಲ್ಲಲು ಬರಲಿ. ಆಗ ಯಾರು ಯಾರಿಗೆ



ಸಾಮಂತರೆಂಬುದು ತಿಳಿದುಹೋಗುತ್ತದೆ." ಎಂದು ಹೇಳಿ ಕಳುಹಿಸಿದನು.

ಎಚ್ಚರಿಸಿದಂತೆ ರಾಜನು ನಡೆದುಕೊಂಡರೆ ಸಿದ್ಧವಾಗಿರಬೇಕೆಂದುಕೊಂಡು ಅರಣ್ಯಕನು ತನ್ನ ಕಡೆಯವರನ್ನು ಸೇರಿಸಿ ಯುದ್ಧಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡತೊಡಗಿದನು. ರಾಜನು ಆಟವಿಕರ ಕೇರಿಯ ಮೇಲೆ ಆಟವಿಕರ ಸೈನ್ಯವನ್ನೇ ಕಳುಹಿಸಿದರೆ ಒಬ್ಬ ಸೈನಿಕನೂ ಹಿಂದಿರುಗಿ ಹೋಗಬಾರದೆಂದು ಎಲ್ಲರಿಗೂ ಹೇಳಿಟ್ಟನು.

ಹಾಗೆ ಅವನು ಎಲ್ಲಾ ಸಿದ್ಧತೆ ನಡೆಸಿದರೂ ನಡೆದ ಕಥೆ ಬೇರೆಯೇ ಆಯಿತು. ಆಟವಿಕರ ಮೇಲೆ ರಾಜನ ಸೈನಿಕರೇನೋ ಯುದ್ಧಕ್ಕೆ ಬಂದರು. ಅವರಲ್ಲಿ ಆಟವಿಕನು ಒಬ್ಬನೂ ಇರಲಿಲ್ಲ. ಹಾಗೆ ಆಟವಿಕರಲ್ಲದ ರಾಜನ ಠಾಣಾಸೈನಿಕರನ್ನು ಆಟವಿಕರು ಪ್ರಚ್ಛನ್ನಯುದ್ಧದಿಂದ ನೆಲಸಮಮಾಡಿದರು. ಅನೇಕರು ಆಟವಿಕರಿಗೆ ಬಂದಿಗಳಾಗಿ ಸಿಕ್ಕಿಕೊಂಡರು. ಕೆಲವರು ಭಾರಿ ಪೆಟ್ಟುತಿಂದು ಓಡಿ ಹೋದರು. ಅರಣ್ಯಕನು ಬಂದಿಗಳಾದ ಸೈನಿಕರೊಂದಿಗೆ "ಯುದ್ಧ ಮಾಡಲು ನಿಮ್ಮ ಸೈನ್ಯದಲ್ಲಿರುವ ಆಟವಿಕರು ಏಕೆ ಬರಲಿಲ್ಲ?" ಎಂದು ಕೇಳಿದನು. "ಅವರೆಲ್ಲಾ ರಾಜಧಾನಿಯಲ್ಲಿ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ" ಎಂದು ಖೈದೀಸೈನಿಕರು ಹೇಳಿದರು.

ಒಮ್ಮೆಗೇ ರಾಜನು ಕಠಿಣವಾಗಿ ತಾಕೀದು ಮಾಡಿದಾಗಲೇ ಅರಣ್ಯಕನಿಗೆ ಏನೋ ಸಂದೇಹ ಎದ್ದಿತ್ತು. ಈಗ ಅದು ಇನ್ನಷ್ಟು ಬಲವಾಯಿತು. ಮುಂದೇನು ಮಾಡಬೇಕೆಂದು ಆಲೋಚಿಸುವಾಗ, ಹೊಸತೊಂದು ಘಟನೆ ಅವನಿಗೆ ಸಹಾಯಮಾಡಿತು. ಅದೇನೆಂದರೆ,

ಕೆಲವರು ಕಳ್ಳರು ಒಂದು ಮೇನೆಯನ್ನು ಸಾಗಿಸಿಕೊಂಡು ಹೋಗುವುದನ್ನು ಆಟವಿಕರು ನೋಡಿದರು. ಕಳ್ಳರಿಗೂ ಆಟವಿಕರಿಗೂ ಹೋರಾಟವು ನಡೆಯಿತು. ಕಳ್ಳರೆಲ್ಲಾ ಆಟವಿಕರ ಬಂದಿಗಳಾದರು. ಆಮೇಲೆ ಮೇನೆಯೊಳಗೆ ನೋಡಿದರೆ, ಅದರೊಳಗೆ ರಾಜಕುಮಾರಿ ಇದ್ದಳು. ನಿಜಸಂಗತಿ ಹೇಳದಿದ್ದರೆ ಚಿತ್ರವಧೆ ಮಾಡುವೆನೆಂದು ಅರಣ್ಯಕನು ಬೆದರಿಸಿದ ಮೇಲೆ ಕಳ್ಳರು ನಿಜಸಂಗತಿಯನ್ನು ಹೇಳಿದರು. ಆಗ ಆ ಕಳ್ಳರು ನಿಜವಾದ ಕಳ್ಳರಲ್ಲವೆಂಬ ಗುಟ್ಟು ಗೊತ್ತಾಯಿತು. ರಾಜನ ಏಕಮಾತ್ರ ಸಂತಾನವಾದ ಆ ಕುಮಾರಿಯನ್ನು ಅರಣ್ಯಕ್ಕೆ ತೆಗೆದುಕೊಂಡು ಹೋಗಿ ಕೊಂದು ಹಾಕಿಬಿಡಬೇಕೆಂದು ಮಂತ್ರಿ ಅವರನ್ನು ನಿಯೋಗಿಸಿದ್ದನಂತೆ!

ಇದನ್ನು ಕೇಳಿದ ಕೂಡಲೇ ಅರಣ್ಯಕನಿಗೆ ಮಿಂಚು ಹೊಳೆದಂತೆ ಸತ್ಯವೇನೆಂಬುದು ಗೊತ್ತಾಯಿತು. ಅವನಿಗೆ ಬಂದ ಅನುಮಾನಕ್ಕೆ ಮೂರ್ತರೂಪ ಬಂದಂತಾಯಿತು. ಅವನು ಮಂತ್ರಿಯಿಂದ ಕಳುಹಿಸಲ್ಪಟ್ಟ ಆ ಸುಳ್ಳಿನ ಕಳ್ಳರೊಂದಿಗೆ, "ಸರಿ. ರಾಜಕುಮಾರಿಯನ್ನು ನೋಡಿಕೊಳ್ಳುವ ಬಾಧ್ಯತೆ



ನಮ್ಮದು. ಅವಳಿನ್ನು ನಮ್ಮ ಕೇರಿಯ ಮಗಳಾಗಿರುತ್ತಾಳೆ. ನೀವೀಗ ನಮಗೆ ಶುಭವಾರ್ತೆ ತಂದವರಾದುದರಿಂದ ನಿಮ್ಮನ್ನು ಸ್ವೇಚ್ಛೆಯಾಗಿ ಬಿಟ್ಟುಬಿಡುತ್ತೇನೆ. ನನ್ನದೂ ನಿಮ್ಮ ಮಂತ್ರಿಯವರದೂ ಒಂದೇ ಆಶಯವಾಗಿದೆ. ಅವರನ್ನು ಸಿಂಹಾಸನದ ಮೇಲೆ ಕೂಡಿಸಲು ನಾನೂ ಸಿದ್ಧನೇ. ಮುಖ್ಯವಾಗಿ ರಾಜನ ಸೊಕ್ಕು ಮುರಿಯಬೇಕು. ಮಂತ್ರಿಯವರೊಂದಿಗೆ ಇದನ್ನು ಕುರಿತು ಮಾತುಕತೆಯಾಡಲು ಅವರನ್ನು ಒಂದುಸಾರಿ ಇಲ್ಲಿಗೆ ಬರಲು ಹೇಳಿರಿ. ನಮ್ಮ ನಡುವೆ ಒಂದು ಒಪ್ಪಂದ ಮಾಡಿಕೊಂಡರೆ ನಮಗಿಬ್ಬರಿಗೂ ಒಳ್ಳೆಯದು " ಎಂದನು.

ಅರಣ್ಯಕನು ಅವರನ್ನು ಕಳುಹಿಸಿದ ಮೇಲೆ ಅವರಿಂದ ಆ ಸಮಾಚಾರ ತಿಳಿದ ಮಂತ್ರಿ ಅರಣ್ಯಕನನ್ನು ನೋಡಲು ಅರಣ್ಯಕ್ಕೆ ಬಂದನು. ಕೂಡಲೇ ಅರಣ್ಯಕನು ಆ ಮಂತ್ರಿಯನ್ನು ತಟಕ್ಕನೆ ಕೊಂದು, ರಾಜಕುಮಾರಿಯನ್ನು ಕರೆದುಕೊಂಡು ರಾಜನನ್ನು ನೋಡಲು ಹೋದನು.

ರಾಜಕುಮಾರಿಯ ಅಪಹರಣದಿಂದ ತುಂಬಾ ಚಿಂತೆಯಲ್ಲಿದ್ದ ರಾಜನಿಗೆ ಮಂತ್ರಿಯೂ ಕೊಲ್ಲಲ್ಪಟ್ಟುದನ್ನು ತಿಳಿದು ಇನ್ನಷ್ಟು ಕಳವಳವಾಯಿತು. ಅರಣ್ಯಕನಿಂದ ಎಲ್ಲಾ ಸಂಗತಿಯನ್ನೂ ತಿಳಿದು, ರಾಜನು ಹೀಗೆಂದನು : "ಅರಣ್ಯಕಾ, ನಿನ್ನ ಆಟವಿಕಸೈನಿಕರು ನಮಗೆ ಎಷ್ಟೋ ವಿಜಯಗಳನ್ನು ಸಾಧಿಸಿಕೊಟ್ಟಿದ್ದಾರೆ. ಅವೆಲ್ಲಾ ಒಂದು ತೂಕವಾದರೆ, ನೀನೀಗ ನನ್ನನ್ನು ದೊಡ್ಡದೊಂದು ಗಂಡಾಂತರದಿಂದ ಕಾಪಾಡಿದ್ದು ಇನ್ನೊಂದು ತೂಕವಾಗಿದೆ. ಮಂತ್ರಿ ಏನು ಮಾಡುವನೆಂಬುದನ್ನು ನಾನು ಸರಿಯಾಗಿ ಗಮನಿಸದೆ ಪರಿಸ್ಥಿತಿ ವಿಷಮಿಸುವವರೆಗೂ ಏನೂ ತಿಳಿಯದಿದ್ದೆ. ಆಟವಿಕರೆಲ್ಲಾ ನನ್ನ ಸಾಮಂತರೆಂದು ನಾನು ಎಂದೂ ಹೇಳಲಿಲ್ಲ. ನಿನ್ನ ತಂದೆ ನನ್ನ ಮೇಲಿನ ಪ್ರೇಮವಿಶ್ವಾಸಗಳಿಂದ, ನಿಮ್ಮ ಸಂಪತ್ತನ್ನೂ ಯುವಕರನ್ನೂ ಕಾಣಿಕೆಯಾಗಿ ನನಗೆ ಕಳುಹಿಸುತ್ತಾ ಬಂದನು. ಅದನ್ನು ನೀನು ವ್ಯತಿರೇಕಿಸಿದರೂ ತಪ್ಪೇನಿಲ್ಲ. ಈ ಮಂತ್ರಿ ಆಟವಿಕಸೈನಿಕರನ್ನು ನನಗೆ ಗೊತ್ತಿಲ್ಲದಂತೆಯೇ ಸೆರೆಮನೆಗೆ ಹಾಕಿಸಿದ್ದಾನೆ. ನಾನೇ ಹಾಕಿಸಿದೆನೆಂಬಂತೆ ನಿನಗೆ ಭ್ರಮೆ ಹುಟ್ಟಿಸಿದ್ದಾನೆ. ನಮ್ಮ ನಡುವೆ ಸ್ನೇಹಸೌಹಾರ್ದ್ರಗಳಿರಬೇಕೇ ಹೊರತು ನಿನ್ನ ಸೈನಿಕರು ರಾಜಧಾನಿಯಲ್ಲಿದ್ದರೇನು, ನಿನ್ನ ಕೇರಿಯಲ್ಲೇ ಇದ್ದರೇನು? ಎಲ್ಲಾ ಒಂದೇ."

ಕೂಡಲೇ ಅರಣ್ಯಕನು ಕೈಮುಗಿದು "ಇಲ್ಲ ಮಹಾಪ್ರಭುಗಳೇ. ಅವರೆಲ್ಲಾ ನಿಮ್ಮ ಹತ್ತಿರವೇ ಇರಲಿ. ಅವರಿಗೆ ಇಲ್ಲಿ ಒಳ್ಳೆಯ ಶಿಸ್ತುಶಿಕ್ಷಣಗಳು ನಿಮ್ಮಲ್ಲಿ ಲಭಿಸುತ್ತವೆ" ಎಂದು ರಾಜನಿಂದ ಅಪ್ಪಣೆ ಪಡೆದು ಹೊರಟುಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಅಮರಪಾಲನು ಕಳುಹಿಸಿದ ತಾಕೀದು ಕೇಳಿ ಅರಣ್ಯಕನಿಗೆ ಉಂಟಾದ ಅನುಮಾನವೆಂತಹುದು? ತನ್ನ

ಕೇರಿಯ ಮೇಲೆ ದಾಳಿ ನಡೆಯುವಾಗ ರಾಜಕುಮಾರಿಯ ಸಮಾಚಾರ ಕೇಳಿ ಹೇಗೆ ಅದನ್ನು ನಿಜವೆಂದು ನಂಬಿದ ? ತನ್ನ ಹಾಗೆಯೇ ಮಂತ್ರಿ ಕೂಡಾ ರಾಜನ ಪತನವನ್ನೇ ಬಯಸುವ ಸಂಗತಿ ಅವನಿಗೆ ಹೇಗೆ ತಿಳಿಯಿತು ? ತಿಳಿದ ಮೇಲೆ ಮಂತ್ರಿಯನ್ನು ಕರೆಯಿಸಿ ಏಕೆ ಕೊಂದನು ? ಎಲ್ಲಾ ಮುಗಿದ ಮೇಲೆ ತಂದೆಯ ಕಾಲದ ಪದ್ಧತಿಯನ್ನೇ ಏಕೆ ಅಮಲಿಗಿಳಿಸಲು ಒಪ್ಪಿದನು ? ಈ ಪ್ರಶ್ನೆಗಳಿಗೆ ಸಮಾಧಾನ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆಯೊಡೆದು ಹೋಳುಹೋಳಾಗುತ್ತದೆ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ತನ್ನ ತಂದೆ ರಾಜನ ಮೇಲೆ ಸ್ನೇಹವಾಗಿಲ್ಲವೆಂದೂ, ದಾಸ್ಯಭಾವದಿಂದಿರುವನೆಂದೂ ಅರಣ್ಯಕನು ತಿಳಿದಿದ್ದನು. ಕ್ರಮವಾಗಿ ಅದರಲ್ಲಿ ಮೋಸಹೋಗುತ್ತಾ ಬಂದನು. ರಾಜನ ಭಟರು ಬಂದು ಕಪ್ಪ ವಸೂಲು ಮಾಡುವಂತೆ ಪ್ರವರ್ತಿಸಿದ್ದೇ ಆ ತಪ್ಪಿಗೆ ಕಾರಣ. ತಾನು ನಾಯಕನಾದ ಕೂಡಲೇ ಅದನ್ನು ಸಹಿಸಲಾರದೆ ಆ ಪದ್ಧತಿಯನ್ನು ನಿರಾಕರಿಸಿದನು. ಆಮೇಲೆ ರಾಜನು ಮಾಡುವ ಪ್ರವರ್ತನೆಯನ್ನು ನೋಡಿ, ತಂದೆಯ ಅಭಿಪ್ರಾಯ ನಿಜವೋ ಸುಳ್ಳೋ ಎಂದು ತಿಳಿಯುವುದೂ ಅವನ ಉದ್ದೇಶವಾಗಿತ್ತು. ಆದರೆ ರಾಜನು ಈ ಕಾಣಿಕೆಗೋಸ್ಕರ, ಆಟವಿಕಸೈನಿಕರನ್ನು ಖೈದಿನಲ್ಲಿಟ್ಟು, ಆಹಾರ ಕೊಡದೆ ಕೊಲ್ಲುವನೆಂದು ಅವನು ಕನಸಿನಲ್ಲಿಯೂ ನೆನೆಸಿರಲಿಲ್ಲ. ಏಕೆಂದರೆ ಬಲಿಷ್ಠರಾದ ಆ ಸೈನಿಕರನ್ನು ಕೊಲ್ಲುವುದು ರಾಜನು ಸ್ವತಃ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಸಮಾನವೇ. ಆದುದರಿಂದಲೇ ಅದು ರಾಜನೇ ಕಳುಹಿಸಿದ ತಾಖೀದೋ ಅಲ್ಲವೋ ಎಂದು ಅವನಿಗೆ ಸಂದೇಹ ವೆದ್ದಿತು. ಆಟವಿಕಮನುಷ್ಯರು ಸೆರೆಯಲ್ಲಿರುವರೆಂದು ಮಂತ್ರಿಯ ಮನುಷ್ಯರಿಂದ ತಿಳಿದ ಮೇಲೆ, ಇದೆಲ್ಲಾ ಮಂತ್ರಿಯದೇ ಕೆಲಸವೆಂದು ಕಂಡುಕೊಂಡನು. ತಾನು ಹೇಳಿ ಕಳುಹಿಸಿದ ಮಾತನ್ನು ನಂಬಿ ಯಾವಾಗ ಆ ಮಂತ್ರಿ ತನ್ನ ಬಳಿಗೆ ಹೊರಟು ಬಂದನೋ, ಆಗ ಮಂತ್ರಿಯ ದುರಾಶೆ ಅರಣ್ಯಕನಿಗೆ ಸ್ಪಷ್ಟವಾಯಿತು. ಅವನು ರಾಜನನ್ನು ನಾಶಮಾಡಿ, ತಾನೇ ಸಿಂಹಾಸನವೇರುವ ಹಂಚಿಕೆಯಲ್ಲಿರುವವನು. ಅಂತೆಯೇ ಅವನು ಆ ರಾಜದ್ರೋಹಿಯನ್ನು ಕೊಂದನು. ಅವನ ಮನಸ್ಸಿನಲ್ಲಿ ವಿಕಲ್ಪವು ಅಳಿದು ಹೋಯಿತು. ತಂದೆ ನಡೆಸಿಕೊಂಡು ಬಂದ ಪದ್ಧತಿಯನ್ನು ಅಮಲುಗೊಳಿಸುತ್ತ, ರಾಜನ ಮೇಲೆ ಸ್ನೇಹ ವಿಶ್ವಾಸದಿಂದ ಇರತೊಡಗಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಅಗಸ್ತ್ಯ

ಅನೇಕ ಮಂದಿ ಪೌರಾಣಿಕ ವ್ಯಕ್ತಿಗಳು ಗಡಿಗೆಗಳಲ್ಲಿ ಹುಟ್ಟಿದರೆಂದು ಹೇಳುತ್ತಾರೆ. ಅಂಥವರಲ್ಲಿ ವಸಿಷ್ಠನೂ, ಅಗಸ್ತ್ಯನೂ ಇದ್ದಾರೆ.

ಅಗಸ್ತ್ಯನು ಬಹಳ ಕಾಲದವರೆಗೆ ಮದುವೆ ಮಾಡಿಕೊಳ್ಳಲಿಲ್ಲ. ಒಂದು ದಿನ ಅರಣ್ಯದಲ್ಲಿ ಕೆಲವು ವ್ಯಕ್ತಿಗಳು ತಲೆಕೆಳಗಾಗಿ ನೇತಾಡಿಕೊಂಡಿರುವುದನ್ನು ಅಗಸ್ತ್ಯನು ನೋಡಿದನು. "ನೀವೆಲ್ಲಾ ಹೀಗೇಕೆ ನೇತಾಡುತ್ತಿದ್ದೀರಿ?" ಎಂದು ಅಗಸ್ತ್ಯನು ಅವರನ್ನು ಕೇಳಿದನು. "ನಮ್ಮ ವಂಶದಲ್ಲಿ ಅಗಸ್ತ್ಯನೆಂಬವನು ಹುಟ್ಟಿ ಜೀವಿಸಿಕೊಂಡಿದ್ದಾನೆ. ಅವನು ಮಕ್ಕಳನ್ನು ಪಡೆಯದಿದ್ದುದರಿಂದ ನಮಗೆ ಸದ್ಗತಿಯಿಲ್ಲದೆ ಹೀಗಿದ್ದೇವೆ" ಎಂದರು ಅವರು.

ಹೀಗೆ ಅವರೆಲ್ಲ ತನ್ನ ಪೂರ್ವಜರೆಂದು ಅಗಸ್ತ್ಯನಿಗೆ ತಿಳಿಯಿತು. ಅವರ ಕಷ್ಟನಿವಾರಣೆಗಾಗಿ ತಾನು ಮದುವೆಯಾಗಬೇಕೆಂದು ನಿಶ್ಚಯಿಸಿ ವಿದರ್ಭರಾಜನ ಬಳಿಗೆ ಹೋಗಿ, ಆತನ ಮಗಳಾದ ಲೋಪಾಮುದ್ರೆಯನ್ನು ತನಗೆ ಕೊಟ್ಟು ಮದುವೆ ಮಾಡಬೇಕೆಂದು ಕೇಳಿದನು. ಕಂದಮೂಲಗಳನ್ನು ತಿಂದು ಕಾಡಿನಲ್ಲಿ ವಾಸಮಾಡುವವನಿಗೆ ತನ್ನ ಮಗಳನ್ನು ಕೊಡಲು ಇಷ್ಟವಿಲ್ಲದೆ ರಾಜನು ಸಂದೇಹಪಟ್ಟನು. ಆಗ ಲೋಪಾಮುದ್ರೆಯೇ ಮುಂದೆ ಬಂದು ಅಗಸ್ತ್ಯನನ್ನು ಮದುವೆಯಾಗಲು ಸಿದ್ಧಳಾದಳು.

ವಿವಾಹವಾದ ಮೇಲೆ ಲೋಪಾಮುದ್ರೆ, ಅಗಸ್ತ್ಯನೊಂದಿಗೆ ತನಗೆ ಒಳ್ಳೆಯ ಬಟ್ಟೆಗಳೂ ಆಭರಣಗಳೂ ಬೇಕೆಂದು ಕೇಳಿದಳು. ಅಗಸ್ತ್ಯನು ಧನಕ್ಕಾಗಿ ಶ್ರುತಪರ್ವನೆಂಬ ರಾಜನ ಬಳಿಗೆ ಹೋದನು. ಶ್ರುತಪರ್ವನ ಹತ್ತಿರ ಧನವಿಲ್ಲದುದರಿಂದ ಇಬ್ಬರೂ ಕೂಡಿ ಪ್ರಥ್ನಶ್ವನೆಂಬ ರಾಜನ ಬಳಿಗೆ ಹೋದರು. ಅವನ ಹತ್ತಿರವೂ ಅಗಸ್ತ್ಯನಿಗೆ ಕೊಡಲು ಧನವಿರಲಿಲ್ಲ. ಇಲ್ವಲನೆಂಬವನ ಹತ್ತಿರ ಅಪಾರ ಧನವಿರುವುದೆಂದು ತಿಳಿದು ಅವರು ಇಲ್ವಲನ ಬಳಿಗೆ ಹೋದರು.

ಈ ಇಲ್ವಲನು ವಾತಾಪಿ ಎಂಬವನನ್ನು ಮೇಕೆಯನ್ನಾಗಿ ಬದಲಾಯಿಸಿ, ಕೊಂದು ಅಡಿಗೆ ಮಾಡಿ ಅತಿಥಿಗಳಾಗಿ ಬಂದ ಬ್ರಾಹ್ಮಣರಿಗೆ ಬಡಿಸುವನು. ತರುವಾಯ "ಬಾರೋ ವಾತಾಪೀ" ಎಂದು ಕರೆದ ಕೂಡಲೇ, ವಾತಾಪಿ ಬ್ರಾಹ್ಮಣರ ಹೊಟ್ಟೆಯನ್ನು ಸೀಳಿ ಹೊರಗೆ ಬರುತ್ತಿದ್ದನು. ಈ ರೀತಿಯಾಗಿ ಅವರು ಬ್ರಾಹ್ಮಣರನ್ನು ಕೊಲ್ಲುತ್ತಿದ್ದರು.

ಇಲ್ವಲನು ತನ್ನ ಬಳಿಗೆ ಬಂದ ಇಬ್ಬರು ರಾಜರಿಗೂ, ಅಗಸ್ತ್ಯನಿಗೂ ಹೊಟ್ಟೆ ತುಂಬ ಊಟ ಮಾಡಿಸಿದನು. ವಾತಾಪೀ ಇಲ್ವಲರ ಸಮಾಚಾರ ತಿಳಿದಿದ್ದ ಅಗಸ್ತ್ಯನು ಊಟಮಾಡಿದ ಕೂಡಲೇ "ವಾತಾಪಿ ಜೀರ್ಣವಾಗಲೀ" ಎನ್ನುತ್ತಾ, ತನ್ನ ಹೊಟ್ಟೆಯನ್ನು ತಡವಿಕೊಂಡನು. ವಾತಾಪಿ ಅಗಸ್ತ್ಯನ ಹೊಟ್ಟೆಯೊಳಗೇ ಜೀರ್ಣವಾಗಿಹೋದನು.

ಈ ಸಂಗತಿ ಇಲ್ವಲನಿಗೆ ತಿಳಿದರೂ ಏನೂ ಹೇಳದೆ ಅವರು ಕೇಳಿದಷ್ಟು ಧನವನ್ನು ಕೊಟ್ಟು ಕಳುಹಿಸಿಬಿಟ್ಟನು. ಆ ಧನದಿಂದ ಲೋಪಾಮುದ್ರೆಯ ಕೋರಿಕೆ ಈಡೇರಿತು.

ಕಾವೇರಿ ಕೂಡಾ ಅಗಸ್ತ್ಯನ ಹೆಂಡತಿಯೆಂದು ಹೇಳುತ್ತಾರೆ. ಒಂದು ಸಾರಿ ಬ್ರಹ್ಮನು ಅಗಸ್ತ್ಯನ ಬಳಿಗೆ ಬಂದು, ಕವೇರನೆಂಬವನ ಮಗಳು ಕಾವೇರಿ ಶಿವನನ್ನು ಧ್ಯಾನಿಸಿ ತಪಸ್ಸು ಮಾಡುತ್ತಿದ್ದಾಳೆಂದೂ, ನೀನೇ ಅವಳನ್ನು ಮದುವೆಯಾಗಬೇಕೆಂದೂ ಹೇಳಿದನು. ಅಗಸ್ತ್ಯನು ಅದಕ್ಕೆ ಒಪ್ಪಿಕೊಂಡು ಅವಳನ್ನು ವರಿಸಿ, ತನ್ನ ಕಮಂಡಲುವಿನಲ್ಲಿ ಇಟ್ಟುಕೊಂಡನು.

ತರುವಾಯ ಅಗಸ್ತ್ಯನು ವಿಂಧ್ಯಪರ್ವತದ ಗರ್ವ ಮುರಿಯಲು ಹೊರಡಬೇಕಾಯಿತು. ಅಗ ಕಮಂಡಲುವನ್ನು ಶಿಷ್ಯರ ಕೈಗೆ ಕೊಟ್ಟು ತಾನೊಬ್ಬನೇ ಅತ್ತ ಹೋದನು. ಶಿಷ್ಯರು ಜಾಗರೂಕತೆಯಿಂದ ಆ ಕಮಂಡಲುವನ್ನು ತೆಗೆದುಕೊಂಡು ಬರುವಾಗ, ಸಹ್ಯಾದ್ರಿಪರ್ವತದಲ್ಲಿ ಶಿಷ್ಯರ ಕೈಜಾರಿ ಕಾವೇರಿ ನದಿಯಾಗಿ ಬದಲಾಯಿಸಿಬಿಟ್ಟಳು.

ವಿಂಧ್ಯಪರ್ವತದ ಸಮಾಚಾರವೇನೆಂದರೆ, ಅದು ವಿಪರೀತ ಎತ್ತರಕ್ಕೆ ಬೆಳೆದು ಸೂರ್ಯಚಂದ್ರರ ದಾರಿಗೆ ಅಡ್ಡವಾಗುತ್ತಹೋಯಿತು. ಮುನಿಗಳು ಎಷ್ಟು ಬೇಡಿಕೊಂಡರೂ ಅದು ಕೇಳಲಿಲ್ಲ. ಋಷಿಮುನಿಗಳು ಅಗಸ್ತ್ಯನೊಂದಿಗೆ ಮೊರೆಯಿಟ್ಟರು. ಅಗಸ್ತ್ಯನು ವಿಂಧ್ಯದ ಬಳಿಗೆ ಹೋಗಿ ತಾನು ದಕ್ಷಿಣದಿಕ್ಕಿಗೆ ಹೋಗಲು ದಾರಿ ಬಿಡುವಂತೆ ಕೇಳಿದನು. ಕೂಡಲೇ ವಿಂಧ್ಯವು ತನ್ನ ಆಕೃತಿಯನ್ನು ತಗ್ಗಿಸಿಕೊಂಡಿತು. ಅಗಸ್ತ್ಯನು ಅದನ್ನು ದಾಟಿ, ತಾನು ತಿರುಗಿಬರುವವರೆಗೂ ಹೀಗೆಯೇ ಇರಬೇಕೆಂದು ವಿಂಧ್ಯಕ್ಕೆ ಹೇಳಿ, ದಕ್ಷಿಣದಿಕ್ಕಿನಲ್ಲೇ ಉಳಿದುಬಿಟ್ಟನು.

ಅಗಸ್ತ್ಯನು ಸಮುದ್ರವನ್ನು ಕೂಡಾ ಒಂದೇ ಗುಟುಕಿಗೆ ಕುಡಿದನು. ಕಾಲಕೇಯರೆಂಬವರು ಮುನಿಗಳನ್ನು ಸದಾ ಪೀಡಿಸಿಕೊಂಡಿದ್ದರು. ಅವರನ್ನು ಕೊಲ್ಲಲು ದೇವತೆಗಳಿಗೂ ಸಾಧ್ಯವಾಗಲಿಲ್ಲ. ಏಕೆಂದರೆ ಅವರು ಸಮುದ್ರದೊಳಗೆ ಅಡಗಿಕೊಳ್ಳುತ್ತಿದ್ದರು. ದೇವತೆಗಳಿಗೆ ಸಹಾಯಮಾಡಲು, ಅಗಸ್ತ್ಯನು ಸಮುದ್ರದ ನೀರನ್ನೆಲ್ಲಾ ಕುಡಿದುಬಿಟ್ಟನು. ಆಗ ಕಾಲಕೇಯರು ಹೊರಬಿದ್ದು, ದೇವತೆಗಳಿಂದ ಕೊಲ್ಲಲ್ಪಟ್ಟರು.



# ತನ್ನ ಮೇಲೆ ಬಂದಾಗ

**ಒಂ**ದು ಊರಿನಲ್ಲಿ ಬೋರಣ್ಣ ಎಂಬವನು ಚಿಕ್ಕತನದಲ್ಲಿ ತಂದೆಯನ್ನು ಕಳೆದುಕೊಂಡಂದಿನಿಂದಲೂ ತಾಯಿಯ ಪೋಷಣೆಯಲ್ಲಿ, ಉಪಯೋಗವಿಲ್ಲದವನಾಗಿ ಬೆಳೆದು, ಊರವರ ಸಹಕಾರದಿಂದ ಮದುವೆಯೂ ಮಾಡಿಕೊಂಡು ಸಂಸಾರ ನಡೆಸಲು ದಾರಿಯಿಲ್ಲದೆ ಕಳ್ಳತನಕ್ಕಿಳಿದನು.

ಕಳ್ಳತನದಿಂದ ಬೇಕಾದಷ್ಟು ಧನವು ಸಿಗುತ್ತಲೂ ಇತ್ತು. ಕಳ್ಳತನ ಬಿಟ್ಟುಬಿಡುವಂತೆ ಹೆಂಡತಿ ಶಾಂತಿ ಎಷ್ಟು ಹೇಳಿದರೂ ಬೋರಣ್ಣ ಕೇಳಲಿಲ್ಲ.

ಒಂದು ದಿನ ಬೋರಣ್ಣ ಕಳವುಮಾಡಲು ಬೇರೆ ಊರಿಗೆ ಹೋಗಿ ಮೂರು ದಿನಗಳ ಮೇಲೆ ಮನೆಗೆ ಬಂದ. ಆಗ ಮನೆಯಲ್ಲಿ ತಾನು ಕಳವುಮಾಡಿ ಕೂಡಹಾಕಿದ ಹಣದ ಪೆಟ್ಟಿಗೆ ಖಾಲಿಯಾಗಿತ್ತು. ಏನಾಯಿತೆಂದು ಹೆಂಡತಿಯನ್ನು ಕೇಳಿದನು. "ನಿನ್ನೆ ರಾತ್ರಿ ನಾನು ನಿದ್ದೆಯಲ್ಲಿರುವಾಗ ಮನೆಯೊಳಗೆ ಕಳ್ಳರು ಬಿದ್ದು ಎಲ್ಲಾ ದೋಚಿ ಕೊಂಡು ಹೋದರು " ಎಂದಳು ಶಾಂತಿ.

ಬೋರಣ್ಣ ಸಂಕಟದಿಂದಲೂ ಕೋಪದಿಂದಲೂ ಹೆಂಡತಿಯನ್ನು ಬಯ್ಯಲು ತೊಡಗಿದನು.

"ಸುಮ್ಮನೆ ಯಾರ್‍ಯಾರಿಂದಲೋ ಕದ್ದುತಂದ ಹಣಕ್ಕೇ ಇಷ್ಟು ಸಂಕಟಪಡುವಿರಾದರೆ, ಕಷ್ಟಪಟ್ಟು ಸಂಪಾದಿಸಿದವರು ಎಷ್ಟು ಸಂಕಟಪಡುತ್ತಾರೋ " ಎಂದಳು ಶಾಂತಿ.

ಬೋರಣ್ಣ ಸ್ತಬ್ಧನಾದ. "ಬುದ್ಧಿ ಬಂತು. ಇನ್ನೆಂದೂ ಕಳ್ಳತನ ಮಾಡುವುದೇ ಇಲ್ಲ" ಎಂದು ಪ್ರಮಾಣ ಮಾಡಿದ.

"ಆ ಹಣವೆಲ್ಲ ನಾನೇ ಅಡಗಿಸಿಟ್ಟಿದ್ದೇನೆ. ಇನ್ನುಮೇಲೆ ನ್ಯಾಯವಾಗಿ ಕೆಲಸಮಾಡಿ ಸಂಪಾದಿಸಿರಿ. ಪಾಪದ ಕೆಲಸಮಾಡಬೇಡಿ " ಎಂದಳು ಶಾಂತಿ.






ಹಿಂದೆ ಸಿರಿಪುರವೆಂಬ ಗ್ರಾಮದಲ್ಲಿ ಕಪನೀಪತಿ ಎಂಬವನು ಪಾಪಪುಣ್ಯಗಳ ಪರಿವೆಯಿಲ್ಲದೆ ಎರಡು ಕೈಗಳಿಂದಲೂ ಧನಾರ್ಜನೆಯೊಂದನ್ನೇ ಗುರಿಯಾಗಿಟ್ಟುಕೊಂಡು ಸಂಪಾದಿಸಿ, ತುಂಬಾ ಆಸ್ತಿಯನ್ನು ಕೂಡ ಹಾಕಿದನು.

ಹಾಗೆ ಅವನು ಜೀವನ ಸಾಗಿಸುತ್ತಿರಲು, ಅವನ ಐವತ್ತನೇ ವಯಸ್ಸಿನಲ್ಲಿ ಅವನ ಹೆಂಡತಿ ತೀರಿಹೋದಳು. ಅಷ್ಟೊಂದು ಧನಿಕನಾದ ಅವನಿಗೆ ಮಕ್ಕಳು ಮಾತ್ರ ಇರಲಿಲ್ಲ. ಅವನಿಗೆ ಸಹಾಯಕನಾಗಿಯೂ; ಎಲ್ಲಾ ಕೆಲಸಗಳನ್ನೂ ನೋಡಿಕೊಳ್ಳುವವನಾಗಿಯೂ ಇರಬೇಕೆಂದು ನಂಬುಗಸ್ಥನಾದ ಒಬ್ಬ ನೌಕರನನ್ನು ಮನೆಯಲ್ಲೇ ಇಟ್ಟುಕೊಂಡಿದ್ದನು. ಆ ನೌಕರನ ಹೆಸರು ರಾಜಣ್ಣ.

ಸಿರಿಪುರದಲ್ಲಿ ವಾರಕ್ಕೆ ಒಂದುಸಾರಿ ಸಂತೆ ನಡೆಯುತ್ತಿದ್ದಿತು. ರಾಜಣ್ಣನು ಸಾಮಾನು ತರಲು ಸಂತೆಗೆ ಹೋಗುವನು. ಅಲ್ಲಿ ಗಂಗಮ್ಮನೆಂಬ ಹುಡುಗಿಯೊಂದಿಗೆ ಅವನಿಗೆ ಪರಿಚಯವಾಗಿತ್ತು. ಗಂಗಮ್ಮ ತುಂಬ ಸುಂದರಿ. ರಾಜಣ್ಣ ಅವಳನ್ನು ಮಾತಾಡಿಸದಿರುವುದೇ ಇಲ್ಲ.

ಒಂದು ದಿನ ಕಪನೀಪತಿಯೂ ರಾಜಣ್ಣನೊಂದಿಗೆ ಸಂತೆಗೆ ಬಂದಿದ್ದನು. ಅಲ್ಲಿ ರಾಜಣ್ಣನನ್ನು ಮಾತಾಡಿಸಿದ ಗಂಗೆಯನ್ನು ನೋಡಿ, "ಈ ಹುಡುಗಿ ಯಾರೋ ?" ಎಂದು ರಾಜಣ್ಣನನ್ನು ಕೇಳಿದನು.

"ಇವಳು ಗಿಳಿಯೂರಿನವಳು. ಇವಳ ತಂದೆಯ ಹೆಸರು ರಾಮಣ್ಣ ಅಂತ, ತುಂಬ ಬಡವರು" ಎಂದನು ರಾಜಣ್ಣ.

ಗಂಗೆಯ ಅಂದಚೆಂದಗಳನ್ನು ನೋಡಿದ ಮೇಲೆ ಕಪನೀಪತಿಗೆ ಅವಳನ್ನು ಮದುವೆಯಾಗಿ ಸಂಸಾರ ಮಾಡಬೇಕೆಂದು ಆಶೆಯಾಯಿತು. ಅಂತೆಯೇ ಅವನು ವಿವಾಹ ಘಟಕನೊಬ್ಬನನ್ನು ಗಿಳಿಯೂರಿನ ರಾಮಣ್ಣನ ಮನೆಗೆ ರಾಯಭಾರ ಕಳುಹಿಸಿದನು. ತನ್ನ ಮಗಳನ್ನು ಧನವಂತನಿಗೆ ಕೊಟ್ಟರೆ ಸುಖವಾಗಿರುತ್ತಾಳೆಂದು ರಾಮಣ್ಣನಿಗೆ ತೋರಿತು. ಆದರೆ ಗಂಗೆ ತನಗೆ ಈ ಮದುವೆ ಬೇಡವೆಂದು ಎಷ್ಟು ಗೋಳಾಡಿದರೂ ರಾಮಣ್ಣ ಕೇಳಲಿಲ್ಲ. ಅವನು ಮದುವೆಯ ಖರ್ಚಿಗೆ ಕೂಡಾ ಕಪನೀಪತಿಯಿಂದಲೇ ಹಣ ತೆಗೆದುಕೊಂಡು, ಕಾರ್ಯ ಮುಂದುವರಿಸಿ ಮುಹೂರ್ತ ಇಡಿಸಿದನು.

ಸದಾನಂದ

ಇಷ್ಟಾದ ಮೇಲೆ ಗಂಗೆಯನ್ನು ಮದುವೆಯಾಗ ಬೇಕೆಂದಿದ್ದ ರಾಜಣ್ಣನಿಗೆ ಹತಾಶೆಯಾಯಿತು. ತನ್ನ ಅಂತರಂಗದ ಗೋಳನ್ನು ತನ್ನಿಬ್ಬರು ಆಪ್ತ ಸ್ನೇಹಿತ ರೊಂದಿಗೆ ಹೇಳಿಕೊಂಡನು.

ಆ ಇಬ್ಬರು ಮಿತ್ರರಲ್ಲಿ ಒಬ್ಬನ ಹೆಸರು ಪರ್ವತ, ಇನ್ನೊಬ್ಬನ ಹೆಸರು ಪಾನಕ. ನಂಬಿದವವರಿಗೆ ಏನೂ ಮಾಡುವಂಥವರು. ಅವರಿಬ್ಬರೂ ರಾಜಣ್ಣನಿಗೆ ಯಾವ ರೀತಿಯಲ್ಲಿ ಸಹಾಯ ಮಾಡುವುದೆಂದು ತುಂಬಾ ಆಲೋಚನೆ ಮಾಡಿದರು.

ನಾಳೆಯೇ ವಿವಾಹ ಮುಹೂರ್ತವೆನ್ನುವಾಗ ಮುಂಚಿನ ದಿನವೇ ಕಪನೀಪತಿ ರಾಜಣ್ಣನನ್ನು ಕರೆದು ಕೊಂಡು, ಪರಿವಾರದೊಂದಿಗೆ ಬಂದು, ಗಿಳಿಯೂರಿನ ಮೇರೆಯಲ್ಲಿದ್ದ ಒಂದು ಶಾಲೆಯಲ್ಲಿ ತಂಗಿದನು.

ಅದೇದಿನ ಸಾಯಂಕಾಲದಲ್ಲಿ ಆ ಊರಿನಲ್ಲಿ ಒಬ್ಬಳು ಹಣ್ಣು ಮುದುಕಿ ಸತ್ತುಹೋದಳು. ಅದನ್ನು ತಿಳಿದು ಪರ್ವತ ಪಾನಕರಿಗೆ ಮದುವೆ ಯನ್ನು ನಿಲ್ಲಿಸಲು ಒಂದು ಒಳ್ಳೆಯ ದಾರಿ ತೋರಿತು.

ಆ ದಿನ ರಾತ್ರಿ ಕಪನೀಪತಿ ಶಾಲೆಯ ಕಿಟಿಕೀ ಹತ್ತಿರವೇ ಮಲಗಿದ್ದನು. ಸುಮಾರು ಅರ್ಧರಾತ್ರಿಯ ಹೊತ್ತಿಗೆ ಪರ್ವತನು ಯಮಧರ್ಮರಾಜನಂತೆಯೂ, ಪಾನಕನು ಯಮಕಿಂಕರನಂತೆಯೂ ವೇಷ ಹಾಕಿ ಕೊಂಡರು. ಆಮೇಲೆ ಪರ್ವತನು ಒಂದು ಕೋಣದ ಮೇಲೆ ಏರಿದನು.

ಅವರಿಬ್ಬರೂ ಆ ಬೀದಿಯಲ್ಲೇ ಬಂದರು. ಶಾಲೆಯ ಹತ್ತಿರ ಯಮಧರ್ಮನು ನಿಂತು, ಒಂದು ವಿಕಟ ನಗುವನ್ನು ಹೊರಡಿಸಿ, ಗರ್ಗರ ಸ್ವರದಿಂದ, "ಎಲೋ ಭಲ್ಲೂಕ ಮುಷ್ಟೀ! ಎಂಥಾ ಮೊಂಡಿ ಪ್ರಾಣವೋ ಆ ಹಣ್ಣಣ್ಣು ಮುದುಕಿಯದು! ಉರುಳಿನೊಳಗೆ ಸಿಕ್ಕಿಕೊಂಡು ಹೇಗೆ ಹಾರಾಡುತ್ತಿದೆ ನೋಡು!" ಎಂದನು.

"ಹೌದು ಪ್ರಭುವೇ! ನಮ್ಮಿಂದಾಗದ್ದಕ್ಕೆ ತಾನೇ ನಿಮ್ಮನ್ನು ಕರೆದುಕೊಂಡು ಬಂದೆವು? ನೀವು ಬಂದು ದರಿಂದಲೇ ಕಾಲಧರ್ಮ ಉಳೀತು, ಅವಳನ್ನು ಎಳೆಯಲು ನಮ್ಮಿಂದಾಗುತಿತ್ತೇ!" ಎಂದ ಕಿಂಕರ



ನಗುವಿನ ಶಬ್ದಕ್ಕೇ ಎಚ್ಚೆತ್ತಿದ್ದ ಕಪನೀಪತಿ ಕಿಟಿಕಿಯ ಬಾಗಿಲು ತೆರೆದು ಹೊರಗಿನ ದೃಶ್ಯ ನೋಡಿ ಸ್ತಂಭೀಭೂತನಾದನು.

ಆಗಲೇ ಯಮಧರ್ಮರಾಜನು ತನ್ನ ಕಿಂಕರನನ್ನು ನೋಡಿ, "ಓಹ್! ಇಲ್ಲಿರುವವನು ಸಿರಿಪುರದ ಕಪನೀಪತಿಯಲ್ಲವೆ? ಇವನ ಆಯುಷ್ಯ ಇನ್ನೊಂದು ವಾರವಷ್ಟೇ! ಆದಿನ ಬಂದು ಇವನ ಪ್ರಾಣಕ್ಕೆ ಉರುಳು ಹಾಕಲು ಮರೆಯಬೇಡ. ಪುನಃ ಹೇಳಲಾರೆ!" ಎಂದನು.

"ಅಪ್ಪಣೆ ಬುದ್ಧೀ, ಅಪ್ಪಣೆ!" ಎಂದನು ಕಿಂಕರ. ಆಮೇಲೆ ಅವರಿಬ್ಬರೂ ಮುಂದೆಸಾಗಿ ಕತ್ತಲೆಯಲ್ಲಿ ಕರಗಿಹೋದರು.

ಕಪನೀಪತಿ ನಡುಗುತ್ತ, ಬಹಳ ಹೊತ್ತು ಮೌನವಾಗಿದ್ದನು. ಅವನ ಶರೀರವೆಲ್ಲಾ ಬೆವರಿತು. ಆಮೇಲೆ ಪಕ್ಕದಲ್ಲಿ ಮಲಗಿದ್ದ ರಾಜಣ್ಣನನ್ನು ಕರೆದು ಎಬ್ಬಿಸಿ "ಕೇಳಿಸಿತೇನೋ ಈಗ ಹೊರಗಿನ ಮಾತುಗಳು? ಅವರು ಯಮನೂ ಅವನ ಕಿಂಕರನೂ ಅಲ್ಲವೇನೋ?" ಎಂದು ಕೇಳಿದನು.

"ಯಮನೂ ಯಮಕಿಂಕರನೇ? ನನಗೇನೂ ಗೊತ್ತಾಗಲಿಲ್ಲವಲ್ಲಾ? ಕನಸು ಕಂಡಿರೇನೋ?" ಎಂದನು ರಾಜಣ್ಣ ಆಶ್ಚರ್ಯದಿಂದ. ತನ್ನ ಒಡೆಯನಿಗೆ ಏನಾಯಿತೋ ಎಂದುಕೊಂಡನು.

ಕಪನೀಪತಿ ಬೆಳತನಕ ನಿದ್ದೆ ಮಾಡಲಿಲ್ಲ. ವಾರದಲ್ಲಿ ಸಾಯಲಿರುವವನು, ಬೆಳಗಾದ ಮೇಲೆ ಮದುವೆಯ ಹಸೆಮನೆಯಲ್ಲಿ ಕೂರುವುದೆಂದರೆ? ಬೇಡವೇ ಬೇಡ! ಒಬ್ಬಳ ಬಾಳುವೆಯನ್ನೇ ಹಾಳು ಮಾಡುವ ಕೆಲಸ ಬೇಡವೇ ಬೇಡ!

ಮರುದಿನ ಕಪನೀಪತಿ ರಾಮಣ್ಣನನ್ನು ಕರೆದು, "ಮದುವೆ ನನಗೆ ಬೇಡ. ಇಟ್ಟ ಮುಹೂರ್ತಕ್ಕೆ ನಿಮ್ಮ ಮಗಳಿಗೆ ಮದುವೆಯಾಗಲಿ. ಹುಡಗಿಗೆ ಇಷ್ಟವಿದ್ದ ಪಕ್ಷದಲ್ಲಿ ನಮ್ಮ ಹುಡುಗ ಈ ರಾಜಣ್ಣನೊಂದಿಗೇ ಅವಳ ಮದುವೆಯಾಗಲಿ, ಈಡು ಜೋಡಿ ಸರಿಯಾಗಿದೆ" ಎಂದನು.

"ತಮಾಶೆಗಾದರೂ ಒಂದು ಮಿತಿಬೇಕಂತೆ. ಕಣ್ಣು ತೆರೆದೇ ಒಬ್ಬ ಅನಾಥನಿಗೆ ಮಗಳನ್ನು ಕೊಡಬೇಕೆನ್ನುವಿರಾ?" ಎಂದು ಕೇಳಿದ ರಾಮಣ್ಣ.

"ಅನಾಥನೇ? ನನ್ನ ಮಗನಂಥವನು. ನನ್ನ ಯಾವತ್ತೂ ಆಸ್ತಿಗೆ ಅವನೇ ವಾರಸನು. ಬೇಕಾದರೆ ಬರೆದು ಕೊಡುತ್ತೇನೆ. ನೀವು ಹೆಚ್ಚು ಸಂತೋಷಪಡುವ ವಿಷಯವಿದು!" ಎಂದನು ಕಪನೀಪತಿ.

ಹೀಗೆ ಗಂಗೆಯೊಂದಿಗೆ ರಾಜಣ್ಣನಿಗೆ ಮದುವೆಯಾಯಿತು. ಆದರೆ ಯಮದೂತರಿಗಾಗಿ ಕಾದು ಕೊಂಡಿದ್ದ ಕಪನೀಪತಿ, ಅನೇಕ ವರ್ಷಗಳವರೆಗೆ ಚೆನ್ನಾಗಿಯೇ ಬದುಕಿದ್ದನು.



# ವರ್ತಕನ ಚಾತುರ್ಯ

ರಾಮದಾಸನೆಂಬ ವರ್ತಕನು ಗಟ್ಟಿಗನು. ದಿನಾ ಲಕ್ಷ್ಮೀಪೂಜೆ ಮಾಡುತ್ತಿದ್ದ. ಲಕ್ಷ್ಮಿ ಕೂಡಾ ಅವನಿಗೆ ಅನುಕೂಲಳಾಗಿ ಲಾಭವನ್ನುಂಟುಮಾಡುತ್ತಿದ್ದಳು. ಒಂದುಸಾರಿ ಲಕ್ಷ್ಮೀದೇವಿಗೆ ವರ್ತಕನ ಮೇಲೆ ಯಾಕೋ ಕೋಪ ಬಂದಿತು. ಅವಳು ಅವನಿಗೆ ಸ್ವಪ್ನದಲ್ಲಿ ಕಾಣಿಸಿ, ತಾನು ಅವನನ್ನು ಬಿಟ್ಟು ಹೊರಟುಹೋಗುವುದಾಗಿ ಹೇಳಿದಳು.

ಹೊರಟುಹೋಗಬೇಡವೆಂದು ವರ್ತಕನು ಎಷ್ಟು ಕೇಳಿಕೊಂಡರೂ ಲಕ್ಷ್ಮಿ ಕೇಳಲಿಲ್ಲ. ಕಟ್ಟಕಡೆಗೆ ವರ್ತಕನು ಉಪಾಯವಿಲ್ಲದೆ "ಹೋಗಲಿ ಅಮ್ಮಾ, ನಿನಗೊಂದು ಮಹಾಪೂಜೆ ಮಾಡಬೇಕೆಂದು ಬಹಳ ಕಾಲದಿಂದ ಅಂದುಕೊಂಡಿದ್ದೆ. ಅದನ್ನೊಂದು ಮಾಡುವ ವರೆಗೆ ಇದ್ದುಬಿಡಮ್ಮ" ಎಂದನು.

"ಸರಿ. ನೀನು ಮಹಾಪೂಜೆ ನಡೆಸುವ ವರೆಗೂ ಹೋಗುವುದಿಲ್ಲ." ಎಂದು ಮಾತುಕೊಟ್ಟಳು ಲಕ್ಷ್ಮೀದೇವಿ, ಮಹಾಪೂಜೆಯ ವೈಭವಸವಿಯುವ ಆಶೆಯಿಂದ.

ಆದರೆ ಶೆಟ್ಟಿ ಮಾರಣೇ ದಿನದಿಂದ ಮಾಮೂಲು ಮಾಡುವ ಲಕ್ಷ್ಮೀಪೂಜೆ ಕೂಡಾ ನಿಲ್ಲಿಸಿದನು. ದಿನಗಳೂ ವಾರಗಳೂ ಕಳೆಯುತ್ತಿದ್ದುವು.

ಲಕ್ಷ್ಮೀದೇವಿಗೆ ಕೋಪಬಂತು. ಅವಳು ವರ್ತಕನ ಕನಸಿನಲ್ಲಿ ಕಾಣಿಸಿ "ಮಹಾಪೂಜೆ ಯಾವಾಗ ಮಾಡುವಿ? ನಾನು ಈ ದಿನವೇ ಹೋಗಿಬಿಡುತ್ತೇನೆ!" ಎಂದಳು.

"ಅಮ್ಮಾ! ಮಹಾಪೂಜೇ ನಡೆಸುವವರೆಗೂ ಹೋಗುವುದಿಲ್ಲವೆಂದು ಮಾತು ಕೊಟ್ಟಿರುವಿಯಲ್ಲಾ?" ಎಂದನು ವರ್ತಕ.

ಶೆಟ್ಟಿ ಈ ಜನ್ಮದಲ್ಲಿ ಮಹಾಪೂಜೆ ಮಾಡುವುದಿಲ್ಲವೆಂದು ಲಕ್ಷ್ಮಿಗೆ ಅರ್ಥವಾಯಿತು. "ಹೋಗಲಿ. ಮಾಮೂಲು ಪೂಜೆಯಾದರೂ ಮಾಡು" ಎಂದು ಹೇಳಿ ಅದೃಶ್ಯಳಾದಳು.



# ಬುದ್ಧಿ ಇಲ್ಲದವನು

ಒಂದು ಊರಿನಲ್ಲಿ ಸುಬ್ಬಯ್ಯ ಸೂರಯ್ಯ ಎಂಬ ಇಬ್ಬರು ಶ್ರಮಜೀವಿಗಳಿದ್ದರು. ಅವರಲ್ಲಿ ಸುಬ್ಬಯ್ಯನನ್ನು ಎಲ್ಲರೂ ಬುದ್ಧಿ ಇಲ್ಲದವನು ಎನ್ನುತ್ತಿದ್ದರು.

ಸುಬ್ಬಯ್ಯ ತನಗೆ ಬುದ್ಧಿ ಇದೆಯೋ ಇಲ್ಲವೋ ಎಂದು ತುಂಬಾ ಯೋಚಿಸಿದನು.

ಕಡೆಗೆ ಸುಬ್ಬಯ್ಯ ಗ್ರಾಮಾಧಿಕಾರಿಯವರಬಳಿಗೆ ಹೋಗಿ, "ನನ್ನನ್ನು ಎಲ್ಲರೂ ಬುದ್ಧಿ ಇಲ್ಲದವನು ಅನ್ನುತ್ತಾರಲ್ಲಾ, ಅದು ನಿಜವೇನು ?" ಎಂದು ಕೇಳಿದನು.

"ನಾನೊಂದು ಕೇಳುತ್ತೇನೆ, ಹೇಳು ನೋಡುವಾ. ನನ್ನ ಕುಟುಂಬದಲ್ಲಿ ನಾಲ್ಕುಮಂದಿ ಇದ್ದೇವೆ. ಒಬ್ಬಳು ನನ್ನ ಹೆಂಡತಿ. ಇನ್ನೊಬ್ಬಳು ನನ್ನ ಮಗಳು. ಮೂರನೇಯವನು ನನ್ನ ಮಗ. ನಾಲ್ಕನೆಯವನು ಯಾರು ಹೇಳು ?" ಎಂದರು.

"ನೀವು ಹೇಳಿದರೆತಾನೇ ನನಗೆ ಗೊತ್ತಾಗೋದು ?" ಎಂದ ಸುಬ್ಬಯ್ಯ.

"ಎಲೋ, ಬುದ್ಧಿ ಇಲ್ಲದವನೇ, ನಾಲ್ಕನೆಯವನು ನಾನೇ !" ಎಂದರು ಗ್ರಾಮಾಧಿಕಾರಿಯವರು.

ಅಲ್ಲಿಂದ ಹಿಂದಿರುಗಿದ ಸುಬ್ಬಯ್ಯ ಸೂರಯ್ಯನಿಗೆ ಅದೇ ಪರೀಕ್ಷೆ ಇಡುತ್ತ, "ಸೂರಯ್ಯಾ, ನಾನೊಂದು ಕೇಳುತ್ತೇನೆ. ಹೇಳು ನೋಡುವಾ, ನನ್ನ ಕುಟುಂಬದಲ್ಲಿ ನಾಲ್ಕು ಮಂದಿ ಇದ್ದೇವೆ. ಒಬ್ಬಳು ನನ್ನ ಹೆಂಡತಿ, ಇನ್ನೊಬ್ಬಳು ನನ್ನ ಮಗಳು, ಮೂರನೇಯವನು ನನ್ನ ಮಗ. ನಾಲ್ಕನೇಯವನು ಯಾರು ? ಹೇಳು !" ಎಂದು ಕೇಳಿದನು.

"ನೀನೇ !" ಎಂದ ಸೂರಯ್ಯ.

"ಎಲೋ ಬುದ್ಧಿ ಇಲ್ಲದವನೇ ! ನಾಲ್ಕನೆಯವರು ನಮ್ಮ ಗ್ರಾಮಾಧಿಕಾರಿಗಳು !" ಎಂದ ಸುಬ್ಬಯ್ಯ.



# ಬಲಿಯ ಭಂಗ



ಪ್ರಹ್ಲಾದನ ಮೊಮ್ಮಗನಾದ ಬಲಿ ಮಹಾ ಶೂರ. ಅವನು ಭೂಮಂಡಲವನ್ನೆಲ್ಲಾ ಜಯಿಸಿ ಮಹಾಚಕ್ರವರ್ತಿಯಾದನು. ಆದರೂ ಅವನಿಗೆ ತೃಪ್ತಿಯಾಗಲಿಲ್ಲ.



ಅವನು ಸ್ವರ್ಗದ ಮೇಲೆ ದಾಳಿ ತೆಗೆದನು. ದೇವತೆಗಳು ಅವನ ರಭಸಕ್ಕೆ ನಿಲ್ಲಲಾರದೆ ಹೋದರು. ಬಲಿಗೆ ದಾಸರಾಗಿ ಇರುವುದೋ ಅಥವಾ ಸ್ವರ್ಗವನ್ನು ಬಿಟ್ಟು ಓಡಿ ಹೋಗುವುದೋ ಹೊರತು ಅವರಿಗೆ ಬೇರೆ ಮಾರ್ಗವಿಲ್ಲದಾಯಿತು.



ದಿಕ್ಕು ಗಾಣದ ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ, ತಮ್ಮ ಪರಿಸ್ಥಿತಿಯನ್ನು ಕುರಿತು ಮೊರೆಯಿಟ್ಟರು. ಬಲಿ ಎಷ್ಟು ಪರಾಕ್ರಮವಂತನೋ ಅಷ್ಟೇ ಉದಾರನಾಗಿಯೂ ಸತ್ಯಸಂಧನಾಗಿಯೂ ಇರುವವನು. ಅವನನ್ನು ಇತರ ರಾಕ್ಷಸರಂತೆ ಸೋಲಿಸುವುದು ಸಾಧ್ಯವಿಲ್ಲ. ಇದೆಲ್ಲ ವಿಷ್ಣುವಿಗೆ ಗೊತ್ತು.



ವಿಷ್ಣು ಕಶ್ಯಪನ ಪತ್ನಿ ಅದಿತಿಯ ಗರ್ಭದಲ್ಲಿ ಮಗನಾಗಿ ಹುಟ್ಟಿದನು. ಅವನು ಜನ್ಮತಃ ಕುಳ್ಳನಾಗಿ ವಾಮನನೆಂದು ಹೆಸರು ಪಡೆದನು. ಅವನು ವೇದವೇದಾಂಗಗಳನ್ನೆಲ್ಲಾ ಅಭ್ಯಸಿಸಿ ಬ್ರಾಹ್ಮಣೋತ್ತಮನೆನಿಸಿದನು.



ಬಲಿ ಒಂದು ಮಹಾ ಯಜ್ಞಕ್ಕೆ ತಲೆ ಹಾಕಿದನು. ಅನೇಕ ನೂರು ಮಂದಿ ಬ್ರಾಹ್ಮಣರು ಋತ್ವಿಕ್ಕುಗಳಾಗಿದ್ದರು. ಆ ಸಂದರ್ಭದಲ್ಲಿ ಬಲಿ ಯಾರು ಏನು ಕೇಳಿದರೂ ಕೊಡುವುದಾಗಿ ಪ್ರಕಟಿಸಿದನು.



ಎಲ್ಲರೂ ಬಲಿಯಿಂದ ತಮ ತಮಗೆ ಬೇಕಾದ ದಾನಗಳನ್ನು ಪಡೆಯುತ್ತಿದ್ದರು. ವಾಮನನೂ ಬಂದಿದ್ದ. ಅವನ ಸರದಿಬಂದಾಗ, ತನಗೆ ಮೂರು ಅಡಿಗಳಷ್ಟು ಸ್ಥಳವು ಬೇಕೆಂದು ಕೇಳಿದನು ವಾಮನ. ಬಲಿ ಸರಿಯೆಂದು ವಾಮನನಿಗೆ ದಾನದ ಧಾರೆಯನ್ನು ಎರೆಯಲು ಸಿದ್ಧನಾದನು.

ಆಗ ಬಲಿಯ ಗುರುವಾದ ಶುಕ್ರನು, ವಾಮನನು ವಿಷ್ಣುವೆಂದು ತಿಳಿದುಕೊಂಡು, ಬಲಿಯನ್ನು ದೂರ ಕರೆದೊಯ್ದು, ವಾಮನನು ಕೇಳಿದ ದಾನವನ್ನು ಕೊಡಬೇಡವೆಂದು ಹೇಳಿದನು.





ಆದರೆ ಬಲಿ ಆಡಿದ ಮಾತು ತಪ್ಪುವವನಲ್ಲ. ಆದುದರಿಂದ ಶುಕ್ರಾಚಾರ್ಯನು ಚಿಕ್ಕ ಹುಳದ ರೂಪದಲ್ಲಿ ಜಲಪಾತ್ರದ ಕೊಂಬಿನೊಳಗೆ ದಾನದಧಾರೆ ಇಳಿಯದಂತೆ ತಡೆದನು.

ಕೊಂಬಿನೊಳಗೆ ದರ್ಭೆಯಿಂದ ಚುಚ್ಚುವಂತೆ ವಾಮನನು ಹೇಳಲು, ಬಲಿ ಹಾಗೆಯೇ ಮಾಡಿದನು, ಶುಕ್ರನು ಹೊರಗೆ ಬಂದು ನಿಜರೂಪ ಧರಿಸಿದಾಗ, ಅವನ ಒಂದು ಕಣ್ಣು ಕುರುಡಾಗಿತ್ತು.





ಬಲಿ ಮೂರು ಅಡಿ ಸ್ಥಳವನ್ನು ಧಾರೆಯೆರೆದ ಕೂಡಲೇ, ವಾಮನನು ಅಪಾರವಾಗಿ ಬೆಳೆದು ಒಂದು ಪಾದದಿಂದ ಭೂಮಿಯನ್ನೂ, ಇನ್ನೊಂದು ಪಾದದಿಂದ ಆಕಾಶವನ್ನೂ ಆಕ್ರಮಿಸಿದನು.



ಇದನ್ನು ನೋಡಿ ಬಲಿ ಸ್ತಂಭೀ ಭೂತನಾದನು. ವಾಮನನು ಬಲಿಯನ್ನು ಮೂರನೇ ಅಡಿಯನ್ನು ಎಲ್ಲಿ ಇಡುವುದೆಂದು ಕೇಳಿದನು. ತನ್ನ ತಲೆಯನ್ನೇ ತೋರಿಸಿದನು ಬಲಿ. ವಾಮನನು ತನ್ನ ಪಾದದಿಂದ ಬಲಿಯನ್ನು ಪಾತಾಳಕ್ಕೆ ತುಳಿದುಬಿಟ್ಟನು. ಈ ವಿಧವಾಗಿ ಒಬ್ಬ ವಾಮನನ ಕೈಯಲ್ಲಿ ಮಹಾಶೂರ ಬಲಿ ಸೋತುಹೋದನು.



ಬಲಿಯ ಹೆಂಡತಿಯಾದ ವಿಂಧ್ಯಾವಳಿ ತನ್ನ ಗಂಡನಿಗೆ ಅನ್ಯಾಯ ಮಾಡಬಾರದೆಂದು ವಾಮನನನ್ನು ಪ್ರಾರ್ಥಿಸಿದಳು. ಬಲಿಯ ಆಜ್ಞೆಗೆ ಇದಿರಿಲ್ಲವೆಂದು ವರವಿತ್ತು, ಅವನ ಮನೆ ಬಾಗಿಲನ್ನು ತಾನೇ ಸ್ವತಃ ಕಾಯುತ್ತಿರುವೆನೆಂದು ವಿಶೇಷ ವರವನ್ನೂ ಕೊಟ್ಟನು ವಾಮನನಾದ ವಿಷ್ಣು.



# ಧ್ರುವ

ಮೊತ್ತಮೊದಲನೇ ಮನು ಎಂದು ಪ್ರಸಿದ್ಧನಾದ ಸ್ವಯಂಭುವನಿಗೆ, ಅನಂತಳೆಂಬ ಹೆಂಡತಿಯಲ್ಲಿ ಉತ್ತಾನಪಾದನೆಂಬ ಮಗನು ಹುಟ್ಟಿದನು. ಉತ್ತಾನ ಪಾದನಿಗೆ ಇಬ್ಬರು ಹೆಂಡತಿಯರು. ಹಿರಿಯ ಹೆಂಡತಿಯಾದ ಸುನೀತಿಯಲ್ಲಿ ಧ್ರುವನು ಹುಟ್ಟಿದ. ಎರಡನೇ ಹೆಂಡತಿಯಾದ ಸುರುಚಿಗೆ ಉತ್ತಮನೆಂಬವನು ಮಗನಾಗಿದ್ದ.

ಉತ್ತಾನಪಾದನಿಗೆ ತನ್ನ ಚಿಕ್ಕ ಹೆಂಡತಿಯಾದ ಸುರುಚಿಯ ಮೇಲೆ ಪ್ರೀತಿ ಹೆಚ್ಚು. ಆದುದರಿಂದ ಅವನು ಅವಳೇನು ಹೇಳಿದರೂ ಕೇಳುತ್ತಿದ್ದನು.

ಒಂದುಸಾರಿ ಧ್ರುವನು ಬಂದು ತನ್ನ ತಂದೆಯ ತೊಡೆಯ ಮೇಲೆ ಕುಳಿತನು. ಅದನ್ನು ನೋಡಿ ಸುರುಚಿ ಅಲ್ಲಿಗೆ ಬಂದು, "ಇಳಿಯೋ ಕೆಳಗೆ. ಹಾಗೆ ಕುಳಿತುಕೊಳ್ಳುವ ಅರ್ಹತೆ ನಿನಗಿಲ್ಲ, ಅದು ನನ್ನ ಮಗನಿಗೆ ಮಾತ್ರವೇ ಇದೆ. ಹಾಗೆ ನಿನ್ನ ಅಪ್ಪನ ತೊಡೇ ಮೇಲೆ ಕುಳಿತುಕೊಳ್ಳಬೇಕಾಗಿದ್ದರೆ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಬೇಕಿತ್ತು! ಏಳೇಳು!" ಎಂದು ಸಿಡುಕುತ್ತ ಧ್ರುವನನ್ನು ಉತ್ತಾನಪಾದನ ತೊಡೆಯಿಂದ ಕೆಳಕ್ಕೆ ಎಳೆದಳು.

ಹೀಗೆ ಮಾಡಿದುದಕ್ಕೆ ಉತ್ತಾನಪಾದನು ಸುರುಚಿಯನ್ನು ನಿಂದಿಸದೆ, ಸುಮ್ಮನಿದ್ದುಬಿಟ್ಟಿದ್ದನು.

ಧ್ರುವನಿಗೆ ಬಹಳ ಕೋಪಬಂತು. ಅವನು ಹೋಗಿ ತನ್ನ ತಾಯಿಯೊಂದಿಗೆ ನಡೆದ ಸಂಗತಿಯನ್ನು ಹೇಳಿದನು. ಆದರೆ ಗಂಡನ ಅಭಿಮಾನವನ್ನು ಸಂಪಾದಿಸುವುದರಲ್ಲಿ ತನ್ನ ಸವತಿಯೊಂದಿಗೆ ಸ್ಪರ್ಧೆಗೆ ನಿಲ್ಲಲಾರದ ನಿಸ್ಸಹಾಯಕಳು ಸುನೀತಿ.

ತನ್ನ ತಂದೆಯ ಮನೆಯಲ್ಲಿ ತನಗೆ ಸ್ಥಾನವಿಲ್ಲವೆಂದುಕೊಂಡು ಧ್ರುವನು ತಾಯಿಯ ಅನುಮತಿ ಪಡೆದು ತಪೋವನಕ್ಕೆ ಹೊರಟನು. ಅಲ್ಲಿ ಅವನು ಸಪ್ತರ್ಷಿಗಳನ್ನು ಕಲೆತುಕೊಂಡು, ಅವರಿಂದ ತಪಸ್ಸು ಮಾಡುವ ವಿಧಾನವನ್ನು ತಿಳಿದು, ವಿಷ್ಣುಮೂರ್ತಿಯನ್ನು ಕುರಿತು ತಪಸ್ಸುಮಾಡಿದನು. ಅವನಿಗೆ ವಿಷ್ಣು ಪ್ರತ್ಯಕ್ಷನಾಗಿ ವರಗಳನ್ನು ಕೊಟ್ಟು ಅಂತರ್ಧಾನನಾದನು.

ತನ್ನ ಮಗನು ವಿಷ್ಣುವಿನಿಂದ ವರಗಳನ್ನು ಪಡೆದು ಹಿಂದಿರುಗಿ ಬಂದನೆಂದು ತಿಳಿದಕೂಡಲೇ ಉತ್ತಾನಪಾದನು ಪರಮಾನಂದಭರಿತನಾಗಿ, ಧ್ರುವನಿಗೇ ರಾಜ್ಯಾಭಿಷೇಕಮಾಡಿ, ತಾನು ತಪಸ್ಸುಮಾಡಲು

ಅರಣ್ಯಕ್ಕೆ ಹೋಗಿಬಿಟ್ಟನು. ಹೀಗೆ ಹಟವನ್ನು ಸಾತ್ವಿಕ ರೀತಿಯಲ್ಲಿ ಸಾಧಿಸಿಕೊಂಡ ಧ್ರುವನು ತನ್ನ ತಂದೆಯಿಂದ ಮಗನೆನ್ನಿಸಿಕೊಂಡು ಖ್ಯಾತನಾದನು.

ಇವನ ತಮ್ಮನಾದ ಉತ್ತಮನ ಗತಿ ಬೇರೆಯೇ ಆಯಿತು. ಅವನು ಮದುವೆಯಾಗಿ ತಂದೆಯ ವಂಶವನ್ನು ಉಳಿಸಿಕೊಳ್ಳುವುದನ್ನು ಬಿಟ್ಟು, ಹಿಮಾಲಯದಲ್ಲಿ ಸ್ವೇಚ್ಛೆಯಾಗಿ ಬೇಟೆಯಾಡುತ್ತ ಕಡೆಗೆ ಯಕ್ಷರಿಂದ ಕೊಲ್ಲಲ್ಪಟ್ಟನು. ಈ ಸಂಗತಿ ತಿಳಿದು ಧ್ರುವನು ಕೋಪಗೊಂಡು ಕುಬೇರನ ಅಲಕಾಪುರಿಯ ಮೇಲೆ ದಾಳಿಮಾಡಿ, ಯಕ್ಷರನ್ನು ಕೊಲ್ಲಲು ತೊಡಗಿದನು, ಕುಬೇರನು ಧ್ರುವನ ವೀರ ಪ್ರತಾಪಗಳಿಗೆ ಬಾಗಿ, ಅವನೊಂದಿಗೆ ಸಂಧಿ ಮಾಡಿಕೊಂಡು, ಯಕ್ಷರನ್ನು ಕಾಪಾಡಿಕೊಳ್ಳಬೇಕಾಯಿತು.

ಧ್ರುವನಿಗೆ ಅನೇಕಮಂದಿ ಹೆಂಡತಿಯರಿದ್ದರು. ಅವರಿಂದ ಅವನು ಅನೇಕಮಂದಿ ಕುಮಾರರಿಗೆ ತಂದೆಯಾಗಿ ತನ್ನ ತಂದೆಯ ವಂಶವನ್ನು ಬೆಳೆಸಿದನು.

ಇವನ ಪತ್ನಿಯರಲ್ಲಿ ಒಬ್ಬಳ ಹೆಸರು ಧನ್ಯೆ. ಅವಳಿಗೆ ಹುಟ್ಟಿದ ಮಗ ಶಿಷ್ಟ. ಶಿಂಶುಮಾರನೆಂಬ ರಾಜನ ಮಗಳು ಭ್ರಮಿ ಎಂಬವಳು ಧ್ರುವನ ಹೆಂಡತಿಯರಲ್ಲಿ ಇನ್ನೊಬ್ಬಳು. ಅವಳಿಗೆ ಕಲ್ಪ ಮತ್ತು ವತ್ಸರನೆಂಬ ಇಬ್ಬರು ಕುಮಾರರು, ಧ್ರುವನಿಗೆ ವಾಯುವಿನ ಕುಮಾರಿಯಾದ ಇಲಾ ಎಂಬವಳು ಸಹ ಹೆಂಡತಿಯಾಗಿದ್ದಳು. ಅವಳಿಗೆ ಉತ್ಕಲನೆಂಬ ಮಗನೂ ಹುಟ್ಟಿದನು. ಶಂಭು ಎಂಬ ಮತ್ತೊಬ್ಬಳು ಹೆಂಡತಿಗೆ ಭವ್ಯ ಮತ್ತು ಶ್ಲಿಷ್ಟಿ ಎಂಬ ಕುಮಾರರು ಹುಟ್ಟಿದರು. ಈ ಹೆಂಡದಿರಲ್ಲದೆ ಧ್ರುವನಿಗೆ ಬೇರೊಬ್ಬಳು ವಿಚಿತ್ರ ಪತ್ನಿ ಕೂಡಾ ಇದ್ದಳು. ಅದು ಅವನ ನೆರಳೇ! ತನ್ನ ನೆರಳನ್ನು ನೋಡಿ ಧ್ರುವನು "ಸ್ತ್ರೀಯಾಗಿ ಬಾ" ಎಂದು ಕರೆಯಲು ಹಾಗೆಯೇ ಆಯಿತು. ಅವನು ಅವಳನ್ನು ಮದುವೆಯಾಗಿ ಅವಳ ಹೊಟ್ಟೆಯಲ್ಲಿ ಹುಟ್ಟಿದ ಐವರು ಮಕ್ಕಳ ತಂದೆಯಾದನು.

ಪೂರ್ವಜನ್ಮದಲ್ಲಿ ಧ್ರುವನು ಬ್ರಾಹ್ಮಣನಾಗಿದ್ದು, ಅವನಿಗೆ ಒಬ್ಬ ರಾಜನೊಂದಿಗೆ ಸ್ನೇಹವಿದ್ದಿತಂತೆ. ಆ ಕಾರಣದಿಂದಾಗಿ, ಅವನಿಗೆ ರಾಜ್ಯಪಾಲನೆಮಾಡಬೇಕೆಂದು ಅಭಿಲಾಷೆಯುಂಟಾಗಿ ಈ ಜನ್ಮದಲ್ಲಿ ಕ್ಷತ್ರಿಯನಾಗಿ ಹುಟ್ಟಿ, ರಾಜ್ಯಪಾಲನೆ ಮಾಡಿದನೆಂದೂ ಹೇಳುತ್ತಾರೆ.

ಕೊನೆಗೆ ವಿಷ್ಣುವಿನ ಅನುಗ್ರಹದಿಂದ ಧ್ರುವನು ನಕ್ಷತ್ರವಾಗಿ, ಉತ್ತರದಿಕ್ಕಿನಲ್ಲಿ ಈಗಲೂ ಪ್ರಕಾಶಿಸಿಕೊಂಡಿದ್ದಾನೆ. ಹಟವನ್ನು ಒಳ್ಳೆಯ ರೀತಿಯಲ್ಲಿ ವಿನಿಯೋಗಿಸಿಕೊಂಡುದರಿಂದಲೇ ಅವನು ಅಷ್ಟು ಅಭಿವೃದ್ಧಿಗೇರಲು ಕಾರಣವಾಯಿತು.



# ವಿದೂಷಕನ ಪ್ರಶ್ನೆ

ಶೃಂಗೇರಿ ರಾಜನ ಆಸ್ಥಾನಕ್ಕೆ ವಿದ್ಯಾಸಾಗರನೆಂಬ ಘನ ಪಂಡಿತನು ಬಂದು, ತನ್ನನ್ನು ಸೋಲಿಸಬಲ್ಲ ಆಸ್ಥಾನ ಪಂಡಿತರಿಗೆ ತನ್ನ ಸ್ವರ್ಣ ಕಂಕಣವನ್ನು ಕೊಟ್ಟುಬಿಡುವೆನೆಂದು ಸಾರಿದನು. ಅದರಂತೆ ಅವನೊಂದಿಗೆ ವಾದ ಮಾಡಿದ ಆಸ್ಥಾನಪಂಡಿತರೆಲ್ಲಾ ಸೋತುಹೋದರು.

ಆಗ ಆಸ್ಥಾನದ ವಿದೂಷಕನು ವಿದ್ಯಾಸಾಗರನೊಂದಿಗೆ "ನಾನು ನಿಮ್ಮನ್ನು ಐದು ಪ್ರಶ್ನೆ ಕೇಳುತ್ತೇನೆ. ಅವುಗಳಿಗೆ ನೀವು ಕೊಡುವ ಉತ್ತರವು ತಪ್ಪಾಗಿರಬೇಕು. ಸರಿಯಾದ ಉತ್ತರ ಕೊಟ್ಟರೆ ಸೋತುಹೋಗುವಿರಿ. ಕೇಳಲೇನು ?" ಎಂದನು.

ವಿದ್ಯಾಸಾಗರನು ಅದಕ್ಕೆ ಒಪ್ಪಿಕೊಂಡು ವಿದೂಷಕನ ಪ್ರಶ್ನೆಗೆ ತಪ್ಪು ಪ್ರತ್ಯುತ್ತರ ಕೊಡ ತೊಡಗಿದ. "ನೀವು ಬೇರೆ ದೇಶದವರಲ್ಲವೇ ?" ಎಂಬ ಪ್ರಶ್ನೆಗೆ "ಅಲ್ಲ, ಇದೇ ದೇಶ" ಎಂದನು. "ನೀವೀಗ ನಿಮ್ಮ ದೇಶದಲ್ಲೇ ಇದ್ದೀರೇನು ?" ಎಂಬ ಪ್ರಶ್ನೆಗೆ "ಹೌದು" ಎಂದು ಉತ್ತರಕೊಟ್ಟ. "ನಿಮ್ಮಹತ್ತಿರ ಸ್ವರ್ಣ ಕಂಕಣ ಇದೆಯಲ್ಲವೇ?" ಎಂದು ಕೇಳಲು, "ಇಲ್ಲ" ಎಂದನು. "ನಮ್ಮ ಈ ರಾಜನನ್ನು ಮಹೀಪಾಲ ಅನ್ನುತ್ತಾರಲ್ಲವೆ ?" ಎನ್ನಲು "ಹಾಗನ್ನುವುದಿಲ್ಲ" ಎಂದು ಉತ್ತರಕೊಟ್ಟನು.

ವಿದೂಷಕನು ಏನೋ ಮರೆತಂತೆ, "ಈಗ ಎಷ್ಟು ಪ್ರಶ್ನೆಗಳಾದುವು ?" ಎಂದನು. ವಿದ್ಯಾಸಾಗರನು "ನಾಲ್ಕಾದುವು. ಇನ್ನೊಂದು ಕೇಳಿ" ಎಂದನು.

"ಈಗ ನಾನು ಕೇಳಿದ ಐದನೇ ಪ್ರಶ್ನೆಗೆ ಸರಿಯಾದ ಪ್ರತ್ಯುತ್ತರ ಕೊಟ್ಟು ಸೋತಿರಿ !" ಎಂದ ವಿದೂಷಕ.

ದೊಡ್ಡ ಪಂಡಿತನ ಮುಖವು ಪೆಚ್ಚು ಪೆಚ್ಚಾಯಿತು.





# ಮಂತ್ರದ ನಿಂಬೆ

ಬಹಳ ವರ್ಷಗಳ ಹಿಂದೆ ಚೀನಾ ದೇಶದ ಪೇಕಿಂಗ್ ನಗರದಲ್ಲಿ ಚಿಂಗ್ ಎಂಬ ಹೆಸರಿನ ಒಬ್ಬ ದರ್ಜಿಯುವನಿದ್ದನು. ಅದು ಅವನ ತಂದೆಯಿಂದ ಬಂದ ಕಸಬು. ದೊಡ್ಡ ದರ್ಜಿಯಾಗಿದ್ದ ಅವನ ತಂದೆ ಸಾಯುವಾಗ ಚಿಂಗ್‌ಗೆ ತನ್ನ ಹೊಲಿಗೇ ಯಂತ್ರದ ಹೊರತು ಬೇರೇನೂ ಉಳಿಸಿರಲಿಲ್ಲ. ಚಿಂಗ್‌ನ ತಂದೆಗೆ ಅನೇಕ ದುರಭ್ಯಾಸಗಳಿದ್ದುದರಿಂದ ಸಂಪಾದಿಸಿದ್ದನ್ನೆಲ್ಲಾ ಭಸ್ಮ ಮಾಡಿದ್ದನು. ಆದರೆ ಚಿಂಗ್‌ಗೆ ತಂದೆಯ ದುರಭ್ಯಾಸಗಳೊಂದೂ ಅಂಟಿರಲಿಲ್ಲ. ತಂದೆಯ ಹಾಗೆ ದುಬಾರಿ ಖರ್ಚು ಮಾಡುವವನೂ ಅಲ್ಲ. ಅವನು ಮನಸ್ಸಿಟ್ಟು ಕಷ್ಟಪಟ್ಟು ಕೆಲಸ ಮಾಡಿ, ತನ್ನ ವಾಡಿಕೆಗಾರರನ್ನು ತೃಪ್ತಿಪಡಿಸಿ, ಬೇಗದಲ್ಲೇ ಮತ್ತೆ ನಾಲ್ಕು ಹೊಲಿಗೆ ಯಂತ್ರಗಳನ್ನು ಕೊಂಡುಕೊಂಡನು. ಆದುದರಿಂದ ನಾಲ್ಕು ಮಂದಿಗೆ ಜೀವನೋಪಾಧಿಗೆ ದಾರಿಯೂ ಆದಂತಾಯಿತು.

ಚಿಂಗನಿಂದಾಗಿ ಅದೇ ಬೀದಿಯಲ್ಲಿರುವ ಹತ್ತು ಮಂದಿ ದರ್ಜಿಗಳಿಗೆ ಕೆಲಸವಿಲ್ಲದೆಹೋಯಿತು. ಅವರು ಪ್ರಾಮಾಣಿಕರಾದ ದರ್ಜಿಗಳಲ್ಲ. ಕೆಲಸದಲ್ಲಿ ಶ್ರದ್ಧೆ ಇಡರು. ಹೇಳಿದ ದಿನಕ್ಕೆ ಮುಗಿಸಿ ಕೊಡರು. ಒಬ್ಬೊಬ್ಬರನ್ನೂ ನಾಲ್ಕಾರು ಸಾರಿ ಸುತ್ತಾಡಿಸುವರು. ಅವರ ಅಂಗಡಿಗೆ ತಿರುಗಿ ತಿರುಗಿ ಬೇಸತ್ತ ಊರ ಜನರಿಗೆ ಚಿಂಗ್ ತುಂಬ ತೃಪ್ತಿಯನ್ನುಂಟು ಮಾಡಿದನು. ಆದುದರಿಂದಲೇ ಇತರ ದರ್ಜಿಗಳಿಗೆ ಗಿರಾಕಿಗಳಿಲ್ಲದೆ ಹೋದರು.

ಹೀಗೆ ಚಿಂಗ್‌ನಿಂದಾಗಿ ಏಟು ತಿಂದ ದರ್ಜಿಗಳೆಲ್ಲಾ ಕೂಡಿ ಚಿಂಗ್‌ನನ್ನು ಪತನಗೊಳಿಸುವುದು ಹೇಗೆಂದು ಆಲೋಚನೆ ಮಾಡತೊಡಗಿದರು. ಅವರಲ್ಲಿ ವಾಂಗ್ ಎಂಬವನು ಒಂದು ಉಪಾಯ ಹೇಳಿದನು. ಗಟ್ಟಿಗನಾದ ಭೂತಮಾಂತ್ರಿಕನಿಂದ ಮಾಟ ಮಾಡಿಸಿಬಿಟ್ಟರೆ ಚಿಂಗ್ ಪಾತಾಳಕ್ಕೆ ಕಂತಿಬಿಡುತ್ತಾನೆಂಬುದೇ ಊರವರ ಗತ್ತು!

ಎಲ್ಲರೂ ಇದು ಒಳ್ಳೆಯ ಯೋಚನೆ ಎಂದು ಅದಕ್ಕೆ ತಯಾರಾದರು. ಅವರೆಲ್ಲ ಭೂತಮಾಂತ್ರಿಕನ ಮನೆಗೆ ಹೋದಾಗ, ಮನೆಯ ಬಾಗಿಲಿಗೆ ಬೀಗ ಹಾಕಿದ್ದಿತು. ಅವನ ಬಂಧುಗಳೊಬ್ಬರಿಗೆ ಏನೋ ರೋಗ ಬಂದಿದ್ದಕ್ಕೆ ಮಂತ್ರಚಿಕಿತ್ಸೆ ನಡೆಸಲು ಹೋಗಿದ್ದನೆಂದು ತಿಳಿಯಿತು. ನಾಳೆ ನೋಡೋಣವೆಂದು ದರ್ಜಿಗಳು ಅವರವರ ಮನೆಗೆ ಹಿಂದಿರುಗಿದರು.

ವಿ. ಎಸ್. ನಾರಾಯಣ

ಮೂರನೇ ದಿನ ವಾಂಗ್‌ನ ಮನೆಗೆ ಭೂತ ಮಾಂತ್ರಿಕನಂತಹ ಒಬ್ಬನು ಬಂದು, ದೊಡ್ಡದೊಂದು ಮಂತ್ರದ ಗರ್ಜನೆ ಮಾಡಿ, "ಯಾರಿಲ್ಲಿ? ನಿನ್ನೆ ಇಲ್ಲಿ ಯಾರೋ ನನ್ನ ಗುರುಗಳನ್ನು ನೆನೆಸಿಕೊಂಡ ರಂತೆ. ಅವರು ಕೂಡಲೇ ನನ್ನನ್ನು ಕಳುಹಿಸಿದ್ದಾರೆ. ಆ ಸಮಯದಲ್ಲಿ ನಾನು ಒಂದು ಭೂತವನ್ನು ಮಾರಣ ಹೋಮಮಾಡುವುದರಲ್ಲಿ ಮಗ್ನನಾಗಿದ್ದು ದರಿಂದ ಕೂಡಲೇ ಬರಲಾಗಲಿಲ್ಲ. ಏನು ವಿಶೇಷ?" ಎಂದು ಕೇಳಿದನು.

ಅವನನ್ನು ನೋಡಿದಕೂಡಲೇ ವಾಂಗ್‌ಗೆ ಅವನ ಮೇಲೆ ಗುರಿ ಬಿದ್ದಿತ್ತು. ಅವನು ಭೂತಮಾಂತ್ರಿಕ ನೊಂದಿಗೆ ತಮಗೆ ಆಗಬೇಕಾದ ಕಾರ್ಯವನ್ನು ಕುರಿತು ಹೇಳಿದನು.

"ಸರಿ. ಮೊದಲು ಭೂತವನ್ನು ಆವಾಹನೆಮಾಡಿ ತೃಪ್ತಿಪಡಿಸಿ ಕಳುಹಿಸಬೇಕು. ಖರ್ಚು ತುಂಬಾ ಆಗುತ್ತೆ. ಸಾಧ್ಯವೇ?" ಎಂದು ಮಾಂತ್ರಿಕನು ಕೇಳಿದನು. "ನಾವು ಹತ್ತು ಮಂದಿ ಇದ್ದೇವೆ. ಖರ್ಚು ಹಂಚಿಕೊಳ್ಳುತ್ತೇವೆ." ಎಂದನು ವಾಂಗ್.

"ನಿನಗೆ ಒಂದು ಮಂತ್ರದ ನಿಂಬೇಕಾಯಿ ಕೊಡು ತ್ತೇನೆ. ಅದರಲ್ಲಿ ಒಂದು ಚಿನ್ನದ ನಾಣ್ಯ ಇಟ್ಟು, ಅದನ್ನು ಚಿಂಗ್‌ನ ದರ್ಜಿ ಅಂಗಡಿಯಲ್ಲಿ ಸೇರಿಸಿಬಿಡು. ಅವನ ತಂಟೆ ಮುಗಿಯುತ್ತದೆ." ಎಂದು ಹೇಳಿ ಭೂತಕಮಾಂತ್ರಿಕನು ಒಂದು ನಿಂಬೇಕಾಯಿಯನ್ನು ಮಂತ್ರಿಸಿ ಸೀಳಿ ವಾಂಗ್‌ನ ಕೈಗೆ ಕೊಟ್ಟನು.

ವಾಂಗ್‌ನ ಹತ್ತಿರ ಚಿನ್ನದ ನಾಣ್ಯವಿರಲಿಲ್ಲ. ತನ್ನ ಹತ್ತಿರವಿದ್ದ ವಸ್ತುಗಳನ್ನೆಲ್ಲ ಮಾರಿ ಒಂದು ಚಿನ್ನದ ನಾಣ್ಯವನ್ನು ಸಂಪಾದಿಸಿ ತಂದು ನಿಂಬೇಕಾಯಿ ಯೊಳಗಿಟ್ಟು ಚಿಂಗ್‌ನ ದರ್ಜಿಯಂಗಡಿಗೆ ಹೋದನು. ಅಲ್ಲಿರುವವರೊಂದಿಗೆ ಅದೂ ಇದೂ ಮಾತಾಡಿ, ನಿಂಬೇಕಾಯಿಯನ್ನು ಮೆಲ್ಲಗೆ ಅಂಗಡಿಯಲ್ಲೊಂದು ಕಡೆ ಜಾರಿಸಿ, ಹೊರಟುಹೋದನು.



ಅಷ್ಟರೊಳಗೆ ಭೂತಮಾಂತ್ರಿಕನು ಉಳಿದ ದರ್ಜಿ ಗಳಿಗೆ ಕೂಡಾ ಹಾಗೆಯೇ ಹೇಳಿ ನಿಂಬೇಕಾಯಿ ಸೀಳಿ ಕೊಟ್ಟು, ಅದರೊಳಗೆ ಚಿನ್ನದ ನಾಣ್ಯ ಇಟ್ಟು ಚಿಂಗ್‌ನ ಅಂಗಡಿಯಲ್ಲಿ ಹಾಕಿಬರಲು ಹೇಳಿದನು. ಎಲ್ಲರೂ ಹಾಗೆಯೇ ಮಾಡಿದರು.

ದಿನಗಳು ಉರುಳುತ್ತಿದ್ದರೂ ಚಿಂಗ್‌ನ ಪತನದ ಸೂಚನೆ ಕೂಡಾ ಕಾಣಲಿಲ್ಲ. ಬದಲಾಗಿ ಚಿಂಗ್ ತನ್ನ ಅಂಗಡಿಯನ್ನು ಇನ್ನಿಷ್ಟು ದೊಡ್ಡದು ಮಾಡಿ, ಮತ್ತಿಷ್ಟು ಅಲಂಕಾರಮಾಡಿ, ಹೊಸ ಹೊಲಿಗೇ ಯಂತ್ರಗಳನ್ನೂ ಕೊಂಡುಕೊಂಡನು.

ಇದನ್ನು ನೋಡಿ ದರ್ಜಿಗಳ ಬುದ್ಧಿಗೆ ಮಂಕು ಕವಿಯಿತು. ಒಂದುದಿನ ಅವರೆಲ್ಲ ಭೂತಮಾಂತ್ರಿಕನ ಮನೆಗೆ ಹೋಗಿ "ನಿಮ್ಮ ಆ ಶಿಷ್ಯ ಎಲ್ಲಿದ್ದಾನೆ?" ಎಂದು ಕೇಳಿದರು.

ಭೂತಮಾಂತ್ರಿಕನು ಆಶ್ಚರ್ಯದಿಂದ, "ನನಗೆ ಶಿಷ್ಯರಾರಿದ್ದಾರೆ? ನಾನೇ ಈ ವೃತ್ತಿಯಲ್ಲಿ ಸಂಪಾದನೆ

ಸಾಲದೆ ಕಷ್ಟಪಡುತ್ತಿದ್ದರೆ ಶಿಷ್ಯರು ಬೇರೆ ಕೇಡೇ ?" ಎಂದನು. ವಾಂಗ್‌ಗೆ ದಿಕ್ಕುಗಳೆಲ್ಲಾ ತಿರುಗಿದುವು. ಆಗ ಚಿಂಗ್ ತನ್ನ ವಿಸ್ತರಿಸಿದ ಹೊಸ ಅಂಗಡಿಯನ್ನು ನೋಡಲು ಬರುವಂತೆ ದರ್ಜಿಗಳನ್ನು ಆಹ್ವಾನಿಸಿದನು. ಅವನ ದಶೆ ಬೆಳಗಲು ಕಾರಣವೇನೆಂದು ತಿಳಿದುಕೊಳ್ಳೋಣವೆಂದು ಎಲ್ಲಾ ದರ್ಜಿಗಳೂ ಚಿಂಗ್‌ನ ಅಂಗಡಿಗೆ ಹೋದರು. ಚಿಂಗ್ ಅವರನ್ನೆಲ್ಲಾ ಉಪಚರಿಸಿ ಒಳ್ಳೆಯ ಆತಿಥ್ಯವನ್ನು ಕೊಟ್ಟನು.

ವಾಂಗ್ ತನ್ನ ಆತುರವನ್ನು ತಡೆದುಕೊಳ್ಳಲಾಗದೆ, "ಚಿಂಗ್, ನಮಗೊಂದು ಕುತೂಹಲ. ಇದ್ದಕ್ಕಿದ್ದಹಾಗೆ ನಿನಗೆ ಇಷ್ಟು ಹಣ ಹೇಗೆ ಬಂತೂ ಅಂತ ?" ಎಂದು ಕೇಳಿಬಿಟ್ಟನು.

"ಅದೇನೋ ನನ್ನ ಅದೃಷ್ಟ ಅನ್ನಬೇಕು. ಯಾವ ಅದೃಷ್ಟದೇವತೆಯೋ ನನ್ನ ಅಂಗಡಿಗೆ ಮಾಯಾ ರೂಪದಲ್ಲಿ ಬಂದು ಸೀಳಿದ ಹತ್ತು ನಿಂಬೆಕಾಯಿಗಳನ್ನೂ ಬಿಟ್ಟುಹೋಯಿತು. ಒಂದೊಂದರಲ್ಲಿಯೂ ಒಂದೊಂದು ಚಿನ್ನದ ನಾಣ್ಯ! ನಿಂಬೆಕಾಯಿಗಳಿಂದ ಷರ್ಬತ್ತುಮಾಡಿ ಕುಡಿದಕೂಡಲೇ ವಿಪರೀತ ಶಕ್ತಿ ಬಂತು. ಚಿನ್ನದಿಂದ ಹೊಸ ಹೊಲಿಗೇ ಯಂತ್ರಗಳನ್ನು ಕೊಂಡುಕೊಂಡನು." ಎಂದನು ಚಿಂಗ್.

ದರ್ಜಿಗಳೆಲ್ಲ ಅಳುಮೋರೆ ಮಾಡಿಕೊಂಡು, "ಆ ಚಿನ್ನದ ನಾಣ್ಯಗಳೆಲ್ಲಾ ನಮ್ಮದೇ. ನಿನ್ನನ್ನು ನಾಶಪಡಿಸಬೇಕೆಂದು ನಮಗಿರುವುದನ್ನೆಲ್ಲಾ ಮಾರಿ ಚಿನ್ನದ ನಾಣ್ಯದ ಮೂಲಕ ನಮ್ಮ ದಾರಿದ್ರ್ಯವನ್ನು ನಿನಗೆ ಕಳುಹಿಸಲು ನೋಡಿದೆವಪ್ಪಾ." ಎಂದರು.

ಚಿಂಗ್ ಮುಗುಳು ನಗುತ್ತ "ಅದಾವುದೂ ನನಗೆ ಗೊತ್ತಿಲ್ಲವಲ್ಲಾ! ಮಂತ್ರತಂತ್ರಗಳ ಮೇಲೆ ನಿಮಗಿರುವ ನಂಬುಗೆ ನನಗಿಲ್ಲದ್ದರಿಂದ ಹೀಗಾಯಿತೋ ಏನೋ ?" ಎಂದನು.

ದರ್ಜಿಗಳು ದುಃಖೋದ್ಗಾರ ತೆಗೆದರು. ಚಿಂಗ್ ಅವರೊಡನೆ ತುಂಬಾ ಸ್ನೇಹಭಾವದಿಂದ, "ಒಂದು ಮಾಡುವಿರಾ ? ನನಗೆ ಯಂತ್ರಗಳಲ್ಲಿ ಕೆಲಸಮಾಡುವವರು ಬೇಕೇ ಬೇಕು. ನಿಮ್ಮಲ್ಲಿ ಯಾರು ಬಂದು ಕೆಲಸ ಮಾಡಿದರೂ ನನಗೆ ಅಭ್ಯಂತರವಿಲ್ಲ. ನಿಮಗೆ ಬರಬೇಕಾದ ಕೂಲಿಯನ್ನೂ ಕೊಟ್ಟುಬಿಡುತ್ತೇನೆ. ಎಷ್ಟು ಹೆಚ್ಚು ಕೆಲಸಮಾಡುವಿರೋ ಅಷ್ಟು ಹೆಚ್ಚು ಲಾಭ ಬರುತ್ತದೆ. ಯಾಕಾಗದು ?" ಎಂದನು.

ದರ್ಜಿಗಳು ಚಿಂಗ್‌ನ ಕೈಕೆಳಗೆ ಕೆಲಸಮಾಡಲು ಒಪ್ಪಿಕೊಂಡರು. ಅಸಲು ರಹಸ್ಯವನ್ನು ಚಿಂಗ್ ಹೇಳಲಿಲ್ಲ. ಆ ದಿನ ದರ್ಜಿಗಳು ತನ್ನಮೇಲೆ ಮಾಟ ಮಾಡಿಸಲು ಆಲೋಚನೆ ನಡೆಸಿದಾಗ ಅದೃಷ್ಟವಶಾತ್ ಅವನು ಹೊಂಚಿ ಕೇಳಿದ್ದನು. ಅವನೇ ಭೂತಮಾಂತ್ರಿಕನ ಶಿಷ್ಯನಾಗಿ ಬಂದವನೆಂಬುದು ಅವನೊಬ್ಬನಿಗೇ ಗೊತ್ತು.



# ಗುಡಿಯಲ್ಲಿ ಮದುವೆ

**ಶೇ**ಷಪ್ಪನ ಕಡೇ ಮಗಳಿಗೆ ಮದುವೆ ನಿಶ್ಚಯವಾಯಿತು. ಗುಡಿಯಲ್ಲಿ ಮದುವೆ ಮಾಡುವುದೆಂಬ ಮಾತಿಗೆ ಎಲ್ಲರೂ ಒಪ್ಪಿದರು. ಯಾವ ಗುಡಿಯಲ್ಲಿ ಮಾಡವುದೆಂಬ ಪ್ರಶ್ನೆ ಬಂದಾಗ, ಒಬ್ಬರ ಅಭಿಪ್ರಾಯ ಇನ್ನೊಬ್ಬರಿಗೆ ಸರಿಹೋಗಲ್ಲಿಲ್ಲ.

ಶೇಷಪ್ಪ ತಮ್ಮ ಊರಿನಲ್ಲಿರುವ ವೆಂಕಟೇಶ್ವರಸ್ವಾಮಿ ಗುಡಿಯಲ್ಲಿ ಮಾಡೋಣವೆಂದ. ಹನುಮಂತನ ಉಪಾಸಕನಾದ ಹಿರಿಯ ಮಗ ಹನುಮಂತನ ಗುಡಿಯಲ್ಲೇ ಮಾಡಬೇಕು ಎಂದ. ಶೇಷಪ್ಪನ ಎರಡನೇ ಮಗ ರಾಮದೇವಾಲಯದಲ್ಲಿ ಮಾಡಬೇಕೆಂದು ಹಟ ಹಿಡಿದ. ಶೇಷಪ್ಪನ ಹಿರಿಯಮಗಳು ಎಲ್ಲಾ ದೇವತೆಗಳಿಗೂ ಆದಿಪೂಜಕನಾದ ವಿನಾಯಕನ ಗುಡಿಯಲ್ಲಿ ಮದುವೆಮಾಡಲು ಹೇಳಿದಳು.

ಈ ಗಲಾಟೆ ಕೇಳಿ ಮದುಮಗಳು, "ಮದುವೆಗೆ ಮುಹೂರ್ತವಿಟ್ಟ ಜೋಯಿಸರನ್ನೇ ಕರೆದು, ಯಾವ ಗುಡಿಯಲ್ಲಿ ಮದುವೆ ಮಾಡುವುದು ಒಳ್ಳೆಯದೋ ಅಂತ ಕೇಳಿ ತಿಳಿದುಕೊಳ್ಳಿ ಅಪ್ಪಾ." ಎಂದಳು.

ಅದು ಒಳ್ಳೆಯ ಅಭಿಪ್ರಾಯವೆನಿಸಿತು.

ಅದರಂತೆ ಜೋಯಿಸನು ಬಂದು ಎಲ್ಲರ ಅಭಿಪ್ರಾಯವನ್ನೂ ಕೇಳಿ, "ಮದುವೆಯನ್ನು ಯಾವ ಗುಡಿಯಲ್ಲಿಯೂ ಮಾಡುವುದು ಅಷ್ಟು ಒಳ್ಳೆಯದಲ್ಲ, ವೆಂಕಟೇಶ್ವರನಿಗೆ ಇಬ್ಬರು ಹೆಂಡತಿಯರಿದ್ದಾರೆ. ಹನುಮಂತನು ಪಾಟೀ ಬ್ರಹ್ಮಚಾರಿ. ವಿನಾಯಕನನ್ನು ಬ್ರಹ್ಮಚಾರಿಯೆಂದು ಕೆಲವರಂದರೆ, ಅವನಿಗೆ ಇಬ್ಬರು ಹೆಂಡಂದಿರೆಂದು ಮತ್ತೆ ಕೆಲವರು ಹೇಳುತ್ತಾರೆ. ರಾಮನು ಎಲ್ಲಾ ವಿಧದಲ್ಲಿ ಉತ್ತಮನೇ ಆದರೂ ಅವನನ್ನು ಮದುವೆಯಾದ ಸೀತೆಗೆ ಎಂತಹ ಗತಿ ಬಂತೋ! ಎಷ್ಟೆಲ್ಲಾ ಕಷ್ಟಪಟ್ಟಳೋ! ಆದುದರಿಂದ ನಿಮ್ಮ ಸ್ವಂತ ಮನೆಯಲ್ಲಿ ಮದುವೆ ಮಾಡುವುದೇ ಒಳ್ಳೇದು," ಎಂದನು.

ಮನೆಯಲ್ಲೇ ಮದುವೆ ಚಪ್ಪರ ಎದ್ದಿತು.





# ದೊಡ್ಡವನ ದೊಡ್ಡತನ

ಅನೇಕ ವರ್ಷಗಳ ಹಿಂದೆ ವಿಶಾಲವೆಂಬ ದೇಶವೊಂದಿತ್ತು. ಅಲ್ಲಿಯ ರೂಪಗಣವೆಂಬ ಒಂದು ಗ್ರಾಮದಲ್ಲಿ ಎಷ್ಟೋ ದೊಡ್ಡ ಮನುಷ್ಯರಿದ್ದರೆಂದು ಹೇಳುತ್ತಿದ್ದರು. ಅಲ್ಲಿ ಎಷ್ಟೋ ಸಂಗೀತ ವಿದ್ವಾಂಸರು, ಮಹಾನಟರು, ಮಹಾಕವಿಗಳು, ಚಿತ್ರಕಾರರು, ಶಿಲ್ಪಿಗಳು ಇರುವರಂತೆ. ಅಂಥವರು ದೇಶದೊಳಗಿನ ಬಡಬಗ್ಗರ ಉಪಯೋಗಕ್ಕಾಗಿ ತಾವು ಸಂಪಾದಿಸಿದ ಧನವನ್ನೆಲ್ಲಾ ವಿನಿಯೋಗಿಸುತ್ತಿದ್ದರಂತೆ.

ಹೀಗೆ ರಾಜಧಾನಿಯಲ್ಲಿ ಅನೇಕರು ಮಾತಾಡಿಕೊಳ್ಳುತ್ತಿದ್ದರು. ವಿಶಾಲದೇಶದ ರಾಜನಾದ ವಿಜಯಸೇನನು ರೂಪಗಣಗ್ರಾಮದ ದೊಡ್ಡವರನ್ನು ಕುರಿತು ಕೇಳಿ, ಆ ಊರಿನಲ್ಲಿ ಎಲ್ಲರಿಗಿಂತ ದೊಡ್ಡವನು ಯಾರೆಂದು ತಿಳಿದುಕೊಂಡು ಬರಲು, ತನ್ನ ಮಂತ್ರಿಯನ್ನೂ, ಸೈನ್ಯಾಧಿಪತಿಯನ್ನೂ, ಪುರೋಹಿತನನ್ನೂ, ಕೋಶಾಧಿಕಾರಿಯನ್ನೂ ಬೇರೆ ಕೆಲವರನ್ನೂ ಕಳುಹಿಸಿಕೊಟ್ಟನು. ಆವರೆಲ್ಲ ಹಿಂದಿರುಗಿ ಬಂದು ಆ ಗ್ರಾಮದಲ್ಲಿ ಎಲ್ಲರಿಗಿಂತ ದೊಡ್ಡವನು ಇಂಥವನೆಂದು ಹೇಳಲು ಸಾಧ್ಯವಿಲ್ಲದೆಹೋದರು. ಕಡೆಗೆ ರಾಜನು ಸ್ವತಃ ವೇಷಬದಲಾವಣೆ ಮಾಡಿಕೊಂಡು ಅಲ್ಲಿಗೆ ಹೋಗಿ ನೋಡಿಬಂದನು. ಅವನಿಂದಲೂ ತನ್ನ ಅನುಮಾನವನ್ನು ಹೋಗಲಾಡಿಸಿಕೊಳ್ಳಲಾಗಲಿಲ್ಲ. ರಾಜನ ಯೋಚನೆ ಬಗೆಹರಿಯಲಿಲ್ಲ.

ಹೀಗಿರುವಾಗ ಚಿರಂಜೀವಿ ಎಂಬ ಮಹಾ ಜ್ಞಾನಿಯೊಬ್ಬನು ಆ ದೇಶಕ್ಕೆ ಬಂದನು. ರಾಜನು ಚಿರಂಜೀವಿಯನ್ನು ತನ್ನ ಬಳಿಗೆ ಕರೆಯಿಸಿ ಮಾತಾಡಿಸಿ ಅವನಿಂದ ಎಷ್ಟೋ ವಿಶೇಷಗಳನ್ನು ಕೇಳಿದ ಮೇಲೆ, ತನ್ನನ್ನು ಪೀಡಿಸುತ್ತಿದ್ದ ಸಮಸ್ಯೆಯನ್ನು ಕುರಿತು ಅವನೊಂದಿಗೆ ಹೇಳಿದನು.

ರೂಪಗಣ ಗ್ರಾಮದಲ್ಲಿ ಎಲ್ಲರಿಗಿಂತಲೂ ಹೆಚ್ಚಿನವನು ಯಾರೆಂದು ತಾನು ತಿಳಿದು ಬಂದು ಹೇಳುವೆನೆಂದು ರಾಜನೊಂದಿಗೆ ಹೇಳಿ, ಚಿರಂಜೀವಿ ಆ ಗ್ರಾಮಕ್ಕೆ ಹೊರಟನು.

ಆ ಊರಿನ ಮೇರೆಗೆ ಬಂದಾಗಲೇ ಚಿರಂಜೀವಿಗೆ ಮಾಧವನೆಂಬವನು ಇದಿರಾದನು. "ನೀವು ನಮ್ಮೂರಿನ ದೊಡ್ಡವರನ್ನು ನೋಡಬೇಕೆಂದು ಬಂದವರು ತಾನೆ? ನಾನು ತೋರಿಸುತ್ತೇನೆ. ಒಬ್ಬೊಬ್ಬರು ದೊಡ್ಡವರನ್ನು ತೋರಿಸಲು ಒಂದೊಂದು ಚಿನ್ನದ ನಾಣ್ಯ ತೆಗೆದುಕೊಳ್ಳುತ್ತೇನೆ. ಒಪ್ಪಿಗೆಯಾದರೆ ನೀವು

ನನ್ನೊಂದಿಗೆಬರಬಹುದು" ಎಂದನು ಮಾಧವ. ಈ ಸಂಗತಿ ರಾಜನ ಮೂಲಕವಾಗಿ ಚಿರಂಜೀವಿಗೆ ಗೊತ್ತಿದ್ದುದರಿಂದ, ಮಾಧವನ ಮಾತಿಗೆ ಅವನೇನೂ ಆಶ್ಚರ್ಯಪಡಲಿಲ್ಲ. ಮಾಧವನು ಚಿರಂಜೀವಿಗೆ ಒಂದು ದಿನದಲ್ಲಿ ಅರುವತ್ತು ಮಂದಿ ದೊಡ್ಡ ಮನುಷ್ಯರನ್ನು ಪರಿಚಯ ಮಾಡಿಸಿ ಅರುವತ್ತು ಚಿನ್ನದ ನಾಣ್ಯಗಳನ್ನು ಸಂಪಾದಿಸಿಕೊಂಡನು.

ಚಿರಂಜೀವಿ ತಾನು ನೋಡಿದ ದೊಡ್ಡ ಮನುಷ್ಯರನ್ನು ನೋಡಿ ತುಂಬಾ ಆಶ್ಚರ್ಯಪಟ್ಟನು. ಅವರು ಅವನೊಂದಿಗೆ ತಾವು ಮಾಡಿದ ದೊಡ್ಡ ಕೆಲಸಗಳನ್ನು ಕುರಿತು ಹೇಳಿಕೊಂಡರು. ದೇಶದಲ್ಲಿ ಆರ್ಥಿಕವಾಗಿ ಕಷ್ಟಪಡುವವರಿಗೆ ಆಯಾ ದೊಡ್ಡ ಮನುಷ್ಯರಿಂದ ಧನಸಹಾಯ ಲಭಿಸಲು ತಕ್ಕ ಏರ್ಪಾಡುಗಳು ಬಹು ಚೆನ್ನಾಗಿ ಆಗಿದ್ದುವು.

"ನಾಳೆ ಇನ್ನೂ ಅನೇಕ ಮಂದಿಯನ್ನು ತೋರಿಸುತ್ತೇನೆ" ಎಂದನು ಮಾಧವ. "ಅದೆಲ್ಲಾ ಸರಿಯೆ. ಆದರೆ ಇಷ್ಟೊಂದು ದೊಡ್ಡ ಮನುಷ್ಯರಿರುವ ಗ್ರಾಮದಲ್ಲಿ, ಅವರನ್ನು ತೋರಿಸುವ ಸೇವನದಲ್ಲಿ ಒಬ್ಬರಿಗೆ ಒಂದರಂತೆ ಚಿನ್ನದ ನಾಣ್ಯ ವಸೂಲು ಮಾಡುವ ನಿನ್ನಂಥವರು ಕೂಡಾ ಇಲ್ಲಿರುವುದನ್ನು ನೋಡಿ ಚಿಂತೆಯಾಗುತ್ತದೆ" ಎಂದನು ಚಿರಂಜೀವಿ.

ಈ ಮಾತು ಕೇಳಿದ ಕೂಡಲೇ ಮಾಧವನು ತಾನು ತೆಗೆದುಕೊಂಡ ಚಿನ್ನದ ನಾಣ್ಯಗಳನ್ನೆಲ್ಲಾ ಚಿರಂಜೀವಿಗೆ ಕೊಟ್ಟು, "ಬೇಡ ಈ ಧನ. ನೀವು ಈ ಹಣವನ್ನು ಸಂತೋಷದಿಂದ ಕೊಡುವಿರೆಂದೇ ಅಂದುಕೊಂಡಿದ್ದೆ. ಸಂಕಟಪಡುತ್ತ ಕೊಟ್ಟಿರೆಂದಾಯಿತು. ಈ ಹಣ ನನಗೆ ಬೇಡ. ನೀವು ಸಂತೋಷವಾಗಿ ಎಷ್ಟು ಕೊಡುವಿರೋ ಅಷ್ಟೇ ಕೊಡಿ, ಸಾಕು" ಎಂದನು.

ಚಿರಂಜೀವಿ ಆಶ್ಚರ್ಯದಿಂದ, "ಅರೆ! ಚೆನ್ನಾಗಿದೆಯಲ್ಲ ನಿನ್ನ ಮಾತಿನ ವರಿಸೆ! ಆದರೂ ಹಣದ ಮೇಲೆ ನಿನಗೆ ಇಷ್ಟು ಆಶೆ ಯಾಕೆ ಹೇಳು?



ಈ ಹಣವನ್ನು ಯಾವುದಕ್ಕಾಗಿ ಖರ್ಚು ಮಾಡಬೇಕೆಂದಿರುವಿ?" ಎಂದು ಕೇಳಿದನು.

"ಅದೆಲ್ಲಾ ನಿಮಗೇಕೆ ಸ್ವಾಮಿ? ಹೇಳಿದರೆ ನೀವೇನಾದರೂ ಆರಿಸುವಿರಾ ತೀರಿಸುವಿರಾ?" ಎಂದನು ಮಾಧವ.

"ಆರಿಸುತ್ತೇನೆ, ತೀರಿಸುತ್ತೇನೆ, ನಂಬು ನನ್ನನ್ನು!" ಎಂದನು ಚಿರಂಜೀವಿ. "ಹಾಗಾದರೆ ನನ್ನೊಂದಿಗೆ ಬನ್ನಿ." ಎಂದು ಮಾಧವನು ಚಿರಂಜೀವಿಯನ್ನು ಊರಿನ ಹೊರಗೆ ದೂರ ಕರೆದುಕೊಂಡುಹೋದನು. ಅಲ್ಲಿ ಕೆಲವು ಗುಡಿಸಲುಗಳಿದ್ದುವು. ಅವುಗಳಲ್ಲಿ ಬಹಳ ಹೀನ ಸ್ಥಿತಿಯಲ್ಲಿ ಬದುಕುವ ಬಡಜನರಿದ್ದರು. ಅವರನ್ನು ನೋಡಿ ಚಿರಂಜೀವಿ, "ಯಾರು ಇವರೆಲ್ಲ?" ಎಂದು ಕೇಳಿದನು.

"ಇಪ್ಪತ್ತು ವರ್ಷಗಳ ಹಿಂದೆ ನಮ್ಮ ಊರಿಗೆ ಅಷ್ಟೇನೂ ಹೆಸರಿರಲಿಲ್ಲ. ಆಗ ಒಬ್ಬ ಸನ್ಯಾಸಿ ಈ ಊರಿಗೆ ಬಂದಿದ್ದ, ಈ ಮನುಷ್ಯರು ಆ ಸನ್ಯಾಸಿ

ಯನ್ನು ಬೇಕೆಂತಲೇ ಅವಮಾನ ಪಡಿಸಿದರು. ಆಗ ಸನ್ಯಾಸಿ ಇವರ ಬದುಕು ಹಾಳಾಗಿ ಹೋಗಿ, ಇವರನ್ನು ಆದರಿಸುವವರಿಗೆ ಕೂಡಾ ಸರ್ವನಾಶವಾಗಿ ಹೋಗಬೇಕೆಂದು ಶಾಪ ಕೊಟ್ಟ. ಊರಿನವರು ಹೆದರಿ ಅವನ ಕಾಲಿಗೆ ಬಿದ್ದು ಪ್ರಾರ್ಥಿಸಿಕೊಂಡಾಗ, ಯಾರಾದರೂ ಊರಿನೊಳಗೇ ಇದ್ದು ಚಿನ್ನದ ನಾಣ್ಯ ಸಂಪಾದಿಸಿ ಇವರಿಗೆ ಒಬ್ಬೊಬ್ಬನಿಗೆ ಸಾವಿರದಂತೆ ಕೊಡಲು ಸಮರ್ಥನಾದರೆ ಮತ್ತೆ ಇವರು ಸುಖವಾಗಿ ಜೀವಿಸುತ್ತಾರೆ, ಎಂದನು ಸನ್ಯಾಸಿ. ಈಗ ನೀವೇ ಹೇಳಿರಿ, ಎಷ್ಟು ಚಿನ್ನದ ನಾಣ್ಯಗಳಿದ್ದರೆ ಮಾತ್ರ ಇವರಿಗೆ ತಲಾ ಸಾವಿರದಷ್ಟು ಸೇರಬೇಕು ?' ಎಂದನು ಮಾಧವ.

"ಇಂಥವರಿಗೆ ಸಹಾಯ ಮಾಡುತ್ತ ನಿನ್ನ ಸರ್ವನಾಶವಾಗುವುದೆಂಬ ಭಯ ನಿನಗಿಲ್ಲವೇನು ?" ಎಂದು ಚಿರಂಜೀವಿ ಅವನನ್ನು ಕೇಳಿದನು.

"ಸರ್ವ ಎಂಬುದಕ್ಕೇನಾದರೂ ಇದ್ದರೆ ತಾನೇ ಹಾಗಾಗಲು ? ಅದಕ್ಕೇ ನಾನು ಮದುವೆಯನ್ನೇ ಮಾಡಿಕೊಳ್ಳಲಿಲ್ಲ. ರಾತ್ರಿಯಲ್ಲಿ ಯಾವ ಮರದ ಕೆಳಗೋ ಮಲಗುತ್ತೇನೆ. ಸರ್ವನಾಶನವಾಗುವಂಥಾದ್ದು ನನಗೇನಿದೆ ? ಈಗಾಗಲೇ ನನ್ನ ಸಂಪಾದನೆಯಿಂದ ಐದು ಮಂದಿಗೆ ಸುಖಜೀವನ ಕೊಡಿಸಿದ್ದೇನೆ. ಇನ್ನೂ ಎಷ್ಟು ಮಂದಿಗೆ ಸಾಧ್ಯವೋ ನೋಡುತ್ತೇನೆ. ನನ್ನ ಆಯುಷ್ಯ ಅಷ್ಟು ಬೇಗ ತೀರಲಿಕ್ಕಿಲ್ಲ" ಎಂದನು ಮಾಧವ.

ಇಷ್ಟು ತಿಳಿದ ಮೇಲೆ ಚಿರಂಜೀವಿ ಆ ಗ್ರಾಮದಲ್ಲಿ ಒಂದು ಕ್ಷಣಕೂಡ ನಿಲ್ಲಲಿಲ್ಲ. ಅವನು ಹಿಂದಿರುಗಿ ವಿಜಯಸೇನ ರಾಜನ ಬಳಿಗೆ ಬಂದು, ತನ್ನ ಅನುಭವಗಳನ್ನು ವಿವರಿಸಿ ಹೇಳಿ, "ನೀವು ತತ್‌ಕ್ಷಣವೇ ಮಾಧವನಿಗೆ ಬೇಕಾಗುವಷ್ಟು ಹಣವನ್ನು ಕಳುಹಿಸಬೇಕು. ಆ ಗ್ರಾಮದಲ್ಲಿ ಎಲ್ಲರಿಗಿಂತಲೂ ಅವನೇ ದೊಡ್ಡವನೆಂದು ನನ್ನ ಅಭಿಪ್ರಾಯ." ಎಂದನು.

"ಅವನು ದೀನ ಜನರನ್ನು ಉದ್ಧರಿಸುತ್ತಾನೆಂಬುದರಿಂದಲೋ ?" ಎಂದು ಕೇಳಿದ ರಾಜ.

"ಅಲ್ಲ ಮಹಾರಾಜ. ನಿಜವಾದ ದೊಡ್ಡ ಮನುಷ್ಯನು ತನ್ನ ದೊಡ್ಡತನವನ್ನು ತಾನೇ ತನ್ನ ಬಾಯಿಯಿಂದ ಹೇಳುವುದಿಲ್ಲ. ಇತರರ ಬಾಯಿಯಿಂದ ಹೇಳಿಸಿಕೊಳ್ಳುವುದರಲ್ಲೇ ದೊಡ್ಡತನವಡಗಿದೆ. ಊರಿನಲ್ಲಿರುವವರೆಲ್ಲ ತಮ್ಮ ತಮ್ಮ ದೊಡ್ಡತನವನ್ನು ಹೊಗಳುತ್ತ ಹೇಳಿಕೊಳ್ಳುತ್ತಾರೆ. ಆ ಮಾಧವನು ಒಂದು ಮಹಾಕಾರ್ಯವನ್ನು ಸಾಧಿಸಲು ಶ್ರಮಿಸುತ್ತಿರುವಾಗ, ಅವನ ದೊಡ್ಡತನವನ್ನು ಗುರುತಿಸದಿರುವ ಆ ಗ್ರಾಮವಾಸಿಗಳು ಮಾಧವನಿಗಿಂತ ದೊಡ್ಡವರು ಹೇಗಾಗುತ್ತಾರೆ ?" ಎಂದನು ಚಿರಂಜೀವಿ.





# ಅನಾಗರಿಕ...?

ಪೂರ್ವಕಾಲದಲ್ಲಿ ಈಜಿಪ್ಟ್ ದೇಶವನ್ನು ಮೆಹರ್ ಎಂಬ ದೊಡ್ಡ ಸುಲ್ತಾನನೊಬ್ಬನು ಪರಾಕ್ರಮದಿಂದ ಪಾಲಿಸಿಕೊಂಡಿದ್ದನು.

ಆವನಿಗೆ ರಾಜ್ಯದಾಹ ಹೆಚ್ಚು. ಇರುವುದರಲ್ಲಿ ತೃಪ್ತಿ ಇಲ್ಲದೆ ರಾಜ್ಯವನ್ನು ಬೆಳೆಸಬೇಕೆಂದು ಅವನಿಗೆ ಆಶೆಯಾಯಿತು. ಇದರಿಂದ ಮೆಹರ್ ಸುಲ್ತಾನ್ ಸುತ್ತುಮುತ್ತಿನ ದೇಶಗಳನ್ನೆಲ್ಲಾ ಆಕ್ರಮಿಸಿ, ಅವ ರಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತ ಚಕ್ರವರ್ತಿ ಯಾಗಬೇಕೆಂದು ನಿಶ್ಚಯಿಸಿಕೊಂಡನು.

ಕೂಡಲೇ ಖಜಾನೆಯ ಧನವನ್ನೆಲ್ಲಾ ವೆಚ್ಚಮಾಡಿಸಿ, ದೊಡ್ಡ ಸೇನೆಯನ್ನು ಸೇರಿಸಿಕೊಂಡು ದಂಡಯಾತ್ರೆಗೆ ತೊಡಗಿದನು.

ಹಾಗೆ ದಂಡೆತ್ತಿ ಬಂದ ಮೆಹರನನ್ನು ಪೌರುಷ ವಂತರಾದ ಕೆಲವುಂದಿ ರಾಜರು ಇದಿರಿಸಿ ಯುದ್ಧಕ್ಕೆ ಬಂದರು. ಆದರೆ ಸಮುದ್ರದ ಹಾಗೆ ಉಕ್ಕಿ ಬರುವ ಈಜಿಪ್ಟು ಸೇನೆಯಮುಂದೆ ಅವರ ಪೌರುಷವೆಲ್ಲಾ ವ್ಯರ್ಥವಾಯಿತು. ಯುದ್ಧಕ್ಕೆ ಬಂದ ಮಹಾ ಮಹಾ ವೀರರೆಲ್ಲಾ ಪ್ರಾಣ ಕಳೆದುಕೊಳ್ಳಬೇಕಾಯಿತು. ಮೆಹರನನ್ನು ಇದಿರಿಸಿ ಹೋರಾಡಿ ಲಾಭವಿಲ್ಲವೆಂದು ಕೊಂಡು ಕೆಲವು ರಾಜರು ಸಂಧಿ ಮಾಡಿಕೊಂಡು ಕಪ್ಪ ಕಟ್ಟಲು ಒಪ್ಪಿಕೊಂಡರು.

ರಾಜ್ಯಗಳು ವಶವಾಗುತ್ತಿದ್ದಷ್ಟೂ ಮೆಹರನಿಗೆ ರಾಜ್ಯದಾಹವು ಹೆಚ್ಚುತ್ತಾಹೋಯಿತು. ಹೊಸ ತಾಗಿ ವಶಪಡಿಸಿಕೊಂಡ ದೇಶಗಳ ಐಶ್ವರ್ಯಗಳನ್ನು ಕೊಳ್ಳೆಹೊಡೆದುಕೊಂಡುಹೋಗಿ, ಹೊಸ ಸೈನ್ಯವನ್ನು ಸೇರಿಸಿ ಹೊಸಹೊಸ ಪ್ರದೇಶಗಳಿಗೆ ದಂಡೆಯಾತ್ರೆ ಮಾಡುತ್ತಿದ್ದನು ಮೆಹರ್.

ಹೀಗೆ ಅವನ ದೌರ್ಜನ್ಯಕ್ಕೆ ಗುರಿಯಾದ ದೇಶ ಗಳಲ್ಲಿ "ಪಿಕಾಂಗೂ" ಎಂಬುದೊಂದು ದೇಶವಿತ್ತು. ಅದು ಮಾತ್ರ ಇತರ ದೇಶಗಳಂತೆ, ಸುಲಭದಲ್ಲಿ ಬಗ್ಗುವಂತಿರಲಿಲ್ಲ.

ಪಿಕಾಂಗೂ ಗುಡ್ಡಬೆಟ್ಟ ಕಾಡುಮೇಡುಗಳಿಂದ ತುಂಬಿದ ದೇಶ. ಅಹಂಕಾರದ ಅತಿರೇಕದಿಂದ ಮೆಹರ್ ಆ ದೇಶವನ್ನು ಮುತ್ತಿಗೆ ಹಾಕಿದನೇ ಹೊರತು. ಅದರ ತಂಟೆಗೆ ಹೋಗದಿರುತ್ತಿದ್ದರೇನೇ ಒಳ್ಳೆಯದಿತ್ತು. ಪಿಕಾಂಗೂ ರಾಜನ ಅನುಚರರೆಲ್ಲಾ ಭಿಲ್ಲಬೇಡರಂತಹ ಕಾಡು ಜಾತಿಯವರು. ಅವರು ಮರಗಳ ಮೇಲೆ. ಹುತ್ತಗಳ ಹಿಂದೆ. ಹೊಂಚಿ



ಕೊಂಡಿದ್ದು ವಿಷ ತಡವಿದ ಬಾಣಗಳನ್ನು ಪ್ರಯೋಗಿಸಿ ಮೆಹರನ ಸೈನ್ಯದ ಅನೇಕಾನೇಕ ವೀರಯೋಧರ ಪ್ರಾಣಗಳನ್ನು ತೆಗೆದುಬಿಟ್ಟರು.

ಅಜಾಗರೂಕತೆಯಿಂದ ರಾತ್ರಿಯಲ್ಲಿ ನಿದ್ದೆಯಲ್ಲಿರುವ ಸಮಯ ನೋಡಿ, ಇರುವೆಗಳ ಸಾಲಿನಂತೆ ತಂಡೋಪ ತಂಡಗಳಾಗಿ ಗುಡ್ಡಗಳಿಂದ ಇಳಿದು ಬಂದು ಮೆಹರನ ಸೈನಿಕರನ್ನು ಎಲ್ಲೆಂದರಲ್ಲೇ ಕಡಿದು ರಾಶಿ ಹಾಕಿ ಓಡಿಬಿಡುವರು. ಅವರಿಗೆ ಸಮಯಾಸಮಯಗಳಿರಲಿಲ್ಲ. ರಾತ್ರಿ ಹಗಲು ಎರಡೂ ಒಂದೇ!

ಇದನ್ನು ನೋಡಿ ಮುಖ್ಯ ಸೇನಾಪತಿ ರಾಜನನ್ನು ಕುರಿತು, "ನಾವು ಈ ದಂಡಯಾತ್ರೆಯನ್ನು ಹಿಂದೆಗೆದು ಹೋಗಿಬಿಡುವುದೇ ಶ್ರೇಯಸ್ಕರ. ಸಾಯದೇ ಉಳಿದಿರುವ ಸೈನಿಕರೆಲ್ಲಾ ತಮ್ಮ ದೇಶಕ್ಕೆ ಹೋಗಬೇಕೆಂಬ ತವಕದಲ್ಲಿದ್ದಾರೆ. ಯಾರಿಗೂ ವಿಜಯದ ನಂಬುಗೆ ಇಲ್ಲ," ಎಂದು ಬಿನ್ನವಿಸಿಕೊಂಡನು. ಆದರೆ ಮೆಹರ್ ಒಪ್ಪಿಕೊಳ್ಳಲಿಲ್ಲ. ಅವನಿಗೆ ಹಟವೇ ಪ್ರಧಾನವಾಗಿತ್ತು."

"ಪ್ರಭೂ! ತಾವು ಚಕ್ರವರ್ತಿ ಎನಿಸಿಕೊಂಡವರು. ನೈಲ್ ನದಿಯ ಪ್ರಾಂತಗಳಿಗೆಲ್ಲಾ ಏಕಚ್ಛತ್ರಾಧಿಪತ್ಯ ವಹಿಸಿದವರು! ಇಷ್ಟಕ್ಕೆ ನಿಲ್ಲಿಸುವುದೇ ಒಳ್ಳೇದು. ನಾನು ವಿನಯದಿಂದ ಹೇಳುವ ಅಭಿಪ್ರಾಯವೇನೆಂದರೆ, ಜಯಿಸಿದ ದೇಶಗಳನ್ನು ಉಳಿಸಿಕೊಳ್ಳುವ ಕಾರ್ಯ ಮಾಡುವುದೇ ಸಾವಿರ ದೇಶಗಳನ್ನು ಗೆದ್ದ ಹಾಗೆ" ಎಂದನು ಸೇನಾಪತಿ.

"ಸಾಧ್ಯವಿಲ್ಲ. ಈಗ ಈ ಷಿಕಾಂಗೂ ಪ್ರದೇಶವನ್ನು ವಶಪಡಿಸಿಕೊಂಡೇ ಆಗಬೇಕು. ಇಷ್ಟೆಲ್ಲಾ ರಾಜರನ್ನು ಬಗ್ಗಿಸಿ ಹಾಕಿ ಕಡೆಗೆ ಒಬ್ಬ ಬೆಟ್ಟದ ರಾಜನಿಗೆ ಬಾಗುವುದೆಂದರೇನು? ಇಷ್ಟು ಕಷ್ಟಪಟ್ಟು ಸಂಪಾದಿಸಿದ ನನ್ನ ಕೀರ್ತಿಗೆ ಕಳಂಕ ಕರುವಂತಿದೆ ನಿನ್ನ ಮಾತು." ಎಂದನು ಮೆಹರ್.

ಮೆಹರನ ಆಜ್ಞೆಗೆ ಮರು ಮಾತಿಲ್ಲ. ಲೆಕ್ಕವಿಲ್ಲದಷ್ಟು ಹಣ ಖರ್ಚು ಮಾಡಿ ಹೊಸ ಸೇನೆಯನ್ನು ತರಿಸಿದನು. ಆ ಕಾಡುರಾಜನನ್ನು ವಶಪಡಿಸಿಕೊಳ್ಳಬೇಕೆಂಬ ಹಟವೇ ಹೊರತು, ಕಲ್ಲು ಮುಳ್ಳು ಹಳ್ಳತಿಟ್ಟುಗಳ ಹೊರತು ಮತ್ತೇನೂ ಇಲ್ಲದ ಅರಣ್ಯವನ್ನು ವಶಮಾಡಿಕೊಳ್ಳುವುದರಿಂದ ಹೆಚ್ಚಿನ ಸೌಭಾಗ್ಯವೇನೂ ಇಲ್ಲವೆಂದು ಮೆಹರನಿಗೆ ಹೊಳೆಯಲಿಲ್ಲ, ಅವನ ಸೈನಿಕರಾರಿಗೂ ಬದುಕುವ ಆಶೆಯೇ ಇರಲಿಲ್ಲ.

ಹಟವೇ ಪ್ರಧಾನವಾದ ಮೆಹರ್, ಷಿಕಾಂಗೂ ರಾಜನಾದ ಬೆಟ್ಸೂನನ್ನು ಜೀವದಿಂದಲೋ, ಕೊಂದೋ ತನ್ನಿದಿರಿಗೆ ತಂದವನಿಗೆ ಸಾವಿರ ಮೊಹರಿ ಕೊಡುವೆನೆಂದು ಹೇಳಿ ಸೈನಿಕರನ್ನು ಹುರಿಗೊಳಿಸಿದನು.

ಮೆಹರನ ಸೈನಿಕರು ಹಟಕ್ಕೆ ಬಿದ್ದು ಕಾಡಿನೊಳಗೆ ಹೊಕ್ಕು ಕಣ್ಣಿಗೆ ಬಿದ್ದ ಭಿಲ್ಲ ವೀರರನ್ನೆಲ್ಲಾ ವಧಿಸಲು ತೊಡಗಿದರು. ಈ ಅನ್ಯಾಯದಿಂದ ಭಿಲ್ಲರು ಮತ್ತಷ್ಟು

ರೊಚ್ಚಿಗೆದ್ದರು. ಅವರೂ ಜೀವದ ಆಶೆ ಬಿಟ್ಟರು. ಒಬ್ಬೊಬ್ಬ ಭಿಲ್ಲನು ಹತ್ತುಮಂದಿ ಸೈನಿಕರನ್ನಾದರೂ ಕೊಲ್ಲದೆ ಸಾಯಲಿಲ್ಲ. ಆದರೆ ಭೂಮಿಯೇ ಹೆತ್ತ ಹಾಗೆ ಮೇಲೆ ಮೇಲೆ ಬರುವ ಈಜಿಪ್ಟು ಸೈನ್ಯವನ್ನು ನಾಶ ಮಾಡುವುದು ಸಾಧ್ಯವಿಲ್ಲವೆಂದು ಅವರಿಗೆ ತೋರಿತು. ಸ್ವಯಂ ಬೆಟ್ಸೊ ರಾಜನೇ ಯುದ್ಧದ ಕಣಕ್ಕೆ ಇಳಿದನು.

ಬೆಟ್ಸೊ ರಾಜನು ಮೊದಲು ಸಂಧಿ ಮಾಡಿಕೊಳ್ಳ ಬಹುದೆಂದು ನೋಡಿದನು. ಆದರೆ ಮೆಹರ್ ಒಪ್ಪಿ ಕೊಳ್ಳಲಾರನೆಂದು ತೋರಿತು. ಸಂಧಿಗೆ ತಲೆ ಹಾಕಿದರೆ ಇಷ್ಟು ದಿನಗಳ ಜಿದ್ದಿನ ಹಗೆಯಿಂದ ತನ್ನನ್ನು ಚಿತ್ರವಧೆ ಮಾಡಿಯಾನೆಂದು ಅವನು ಅಂದು ಕೊಂಡನು. ಈ ಪರಿಸ್ಥಿತಿಯಲ್ಲಿ ಯುದ್ಧ ಮಾಡಿ ವೀರಸ್ವರ್ಗ ಪಡೆಯುವುದೇ ಮೇಲು. ಈ ನಿಶ್ಚಯ ದಿಂದ ಬೆಟ್ಸೊ ಎಲ್ಲರನ್ನೂ ತನ್ನೊಂದಿಗೆ ಕರೆದು ಕೊಂಡು, ಈಜಿಪ್ಟು ಸೇನೆಗಳನ್ನು ಎರಡು ಬೆಟ್ಟಗಳ ನಡುವಿನಲ್ಲಿ ಇದಿರಿಸಿ ಭಯಂಕರವಾಗಿ ಢೀ ಕೊಟ್ಟನು.

ಅಂತೂ ಇಂತೂ ಆ ಮಹಾ ಯುದ್ಧದಲ್ಲಿ ಕಡೆಗೆ ಮೆಹರ್‌ಗೇ ವಿಜಯವಾಯಿತು. ಕಾಡು ಜಾತಿಯ ವೀರರೊಬ್ಬರೂ ಉಳಿಯಲಿಲ್ಲ. ಮೆಹರನ ಸೈನ್ಯ ದಲ್ಲಿಯೂ ಸಾವಿರಾರು ಸೈನಿಕರು ಪ್ರಾಣ ಬಿಟ್ಟಿದ್ದರು. ಉಳಿದವರು ಹಮ್ಮಾ ಬದುಕಿದೆವೆಂದು ಸಮಾಧಾನದ ನಿಟ್ಟುಸಿರುಬಿಟ್ಟರು.

"ಬೆಟ್ಸೊ ಎಲ್ಲಿ? ಹಿಡಿದು ತಂದಿರುವೆಯಾ?" ಎಂದು ಮೆಹರ್ ಆತುರದಿಂದ ಸೇನಾಪತಿಯನ್ನು ಕೇಳಿದನು.

"ಗಾಯಗಳಿಂದ ತುಂಬಿದ ಅವನ ಕಳೇಬರವು ನಮ್ಮ ಸೈನಿಕರ ಕಳೇಬರಗಳ ನಡುವೆ ಇದೆ ಪ್ರಭು. ಅದೂ ಛಿನ್ನಾಛಿನ್ನವಾಗಿದೆ. ಅವನ ಮುಂಡವೇ ನಾಲ್ಕಾರು ಮಂದಿಗಳನ್ನು ಕೊಂದಿತು" ಎಂದನು ಒಬ್ಬ ಸೈನಿಕ.



ಅವನನ್ನು ನೋಡಬೇಕೆಂಬ ಕುತೂಹಲಹಲ್ಲಿ ಮೆಹರ್ ಹೊರಟನು. ಸತ್ತ ಕಳೇಬರಗಳನ್ನು ತುಳಿದುಕೊಂಡೇ ಅವರು ನಡೆದರು.

ಅವರು ಆ ಸ್ಥಳವನ್ನು ತಲಪಿದಾಗ, ಅಚ್ಚ ಕರಿಯ ಶರೀರದ, ಎತ್ತರವಾದ ಮನುಷ್ಯನೊಬ್ಬ ಆ ಸಾವಿರಾರು ಶವಗಳ ನಡುವಿನಲ್ಲಿ ನಾಲ್ಕು ಕಡೆಯೂ ನೋಡುತ್ತ ನಿಂತಿದ್ದನು.

ಅವನನ್ನು ನೋಡಿ ಮೆಹರ್ "ಯಾರು ನೀನು?" ಎಂದು ಕೇಳಿದನು. ಅವನು ಸುಮ್ಮನೆ ತಿರುಗಿ ಮೆಹರ ನನ್ನು ನೋಡಿದನು; ಮಾತಾಡಲಿಲ್ಲ.

"ಇವನು ಯಾವನೋ ನರಮಾಂಸ ಭಕ್ಷಕ. ಶವ ಗಳನ್ನು ಕಿತ್ತು ತಿನ್ನಲು ಬಂದಿದ್ದಾನೆ" ಎಂದನು ಸೇನಾಪತಿ.

ಸೇನಾಪತಿ ಹೇಳಿದ ಮಾತು ನಿಜವೇ, ಆಫ್ರಿಕಾ ದೇಶದ ಕಾಡುಗಳಲ್ಲಿ ಮನುಷ್ಯರ ಮಾಂಸ ತಿನ್ನು ವವರು ಅನೇಕಮಂದಿ ಇದ್ದಾರೆ.

ಮೆಹರ್ ಆ ನರಮಾಂಸ ಭಕ್ಷಕನೊಂದಿಗೆ, "ಇಷ್ಟೊಂದು ಮಾಂಸ ಬಿದ್ದಿರುವಾಗ ನೀನು ಅತ್ತಿತ್ತ ನೋಡುತ್ತ ನಿಂತಿರುವುದು ಏನನ್ನು?" ಎಂದು ಕೇಳಿದನು.

"ಇವರನ್ನೆಲ್ಲಾ ತಿನ್ನಲಿಕ್ಕಾಗಿ ಯಾರೋ ಕೊಂದು ಹಾಕಿದ್ದಾರೆ. ನನಗೆ ಬೇಕಾದ್ದು ಒಂದೇ ಶವ ಮಾತ್ರ. ಆದರೂ ಕೊಂದವರ ಅನುಮತಿ ತೆಗೆದುಕೊಂಡು ಇವುಗಳನ್ನು ತಿನ್ನ ಬೇಕಾದ್ದೇ ನ್ಯಾಯವಲ್ಲವೇ ? ಇವರನ್ನು ಕೊಂದವರು ಬರುತ್ತಾರೋ ಅಂತ ನೋಡುತ್ತಿದ್ದೇನೆ. ನೀವಿಬ್ಬರು ತಾನೇ ಬಂದಿದ್ದೀರಿ ? ನೀವಿಬ್ಬರೇ, ಇಷ್ಟು ಶವಗಳನ್ನು ಹೇಗೆ ತಿನ್ನುವಿರೋ?" ಎಂದ ಆ ಕರಿಯ.

ಮೆಹರ್ ಅವನ ಮಾತಿಗೆ ನಗುತ್ತ, "ಇವರನೆಲ್ಲ ಕೊಲ್ಲಿಸಿದವನು ನಾನೇ. ಆದರೆ ತಿನ್ನಲಿಕ್ಕಾಗಿ ಅಲ್ಲ" ಎಂದನು.

ಕರಿಯನು ಆಶ್ಚರ್ಯವನ್ನು ಪ್ರದರ್ಶಿಸುತ್ತ, "ತಿನ್ನಲಿಕ್ಕೆ ಅಲ್ಲದಿದ್ದರೆ ಇಷ್ಟು ಜನರನ್ನು ವ್ಯರ್ಥವಾಗಿ ಏಕೆ ಕೊಲ್ಲಿಸಿದಿರಿ?" ಎಂದು ಮರು ಪ್ರಶ್ನೆ ಮಾಡಿದನು.

ಮೆಹರ್ ಚಕ್ರವರ್ತಿ ತನ್ನ ಸೇನಾಪತಿಯೊಂದಿಗೆ, "ಇವನೊಬ್ಬ ತೀರ ಅನಾಗರಿಕ ಪ್ರಾಣಿ. ಇವನಿಗೆ ಅರ್ಥವಾಗುವ ಹಾಗೆ ಹೇಳಲು ನಮಗೆ ಸಾಧ್ಯವಾಗದು." ಎಂದನು.

ಆಗ ಚಕ್ರವರ್ತಿ ಮೆಹರನ ಹಿಂದೆ ಯಾರೋ ನೆಗಾಡಿದಂತೆ ಶಬ್ದವಾಯಿತು. ಮೆಹರ್ ತಟಕ್ಕನೆ ಹಿಂದಿರುಗಿ ನೋಡಿದನು.

ಕಾಡಿನಲ್ಲಿ ತಪಸ್ಸು ಮಾಡುವ ಫಕೀರನೊಬ್ಬ ನಿಂತು ನಗುತ್ತಿದ್ದ. ಅವನು ಎಲ್ಲ ಮಾತನ್ನೂ ಕೇಳಿದ್ದನು.

"ಮಹಾತ್ಮರೇ, ನಗುವಿರೇಕೆ ?" ಎಂದು ಮೆಹರ್ ವಿಸ್ಮಯದಿಂದ ಕೇಳಿದನು.

"ರಾಜನೇ, ನೀನು ಅನಾಗರಿಕನೆಂದು ಹೇಳಿದ ಈ ನರಮಾಂಸ ಭಕ್ಷಕನು ಹಸಿವನ್ನು ತೀರಿಸಲಿಕ್ಕೆ ಹೊರತು ವ್ಯರ್ಥವಾಗಿ ತನ್ನಂತಹ ಮನುಷ್ಯರನ್ನು ಕೊಲ್ಲುವವನಲ್ಲ. ನೀನೋ ? ಸಾಮ್ರಾಜ್ಯವನ್ನು ವ್ಯಾಪಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಯುದ್ಧಕ್ಕೆ ತಲೆ ಹಾಕಿ ಲಕ್ಷೋಪಲಕ್ಷ ಮನುಷ್ಯರ ಪ್ರಾಣವನ್ನು ತೆಗೆಯಿಸುತ್ತಿರುವೆ. ಒಂದು ಕ್ಷಣ ಆಲೋಚನೆ ಮಾಡು. ಆಗ ನಿಮ್ಮಿಬ್ಬರಲ್ಲಿ ಅನಾಗರಿಕನು ಯಾರೆಂದು ನಿನಗೇ ತಿಳಿಯುತ್ತದೆ!" ಎಂದು ಫಕೀರನು ಹೇಳಿದ ಮಾತು ಸಿಡಿಲಿನಂತೆ ಮೆಹರನ ಕಿವಿಗಳಲ್ಲಿ ಹೊಕ್ಕಿತು.

ಫಕೀರನ ಮಾತಿನಲ್ಲಿರುವ ನಿಜವನ್ನು ತಿಳಿದು ತಲೆ ತಗ್ಗಿಸಿದ ಮೆಹರ್, "ಇವತ್ತಿನಿಂದ ಯುದ್ಧದ ಮಾತೆತ್ತಲಾರೆ!" ಎಂದು ನಿಶ್ಚಯಿಸಿಕೊಂಡನು.





# ದೇವೀಭಾಗವತ

ಶುಕನ ಮಾತನ್ನು ಕೇಳಿ ವ್ಯಾಸನು, "ಕಂದಾ, ನಾನು ನೂರು ವರ್ಷ ತಪಸ್ಸುಮಾಡಿ ನಿನ್ನನ್ನು ಪಡೆದಿದ್ದೇನೆ. ನನ್ನ ಮಾತಿಗೆ ಇದಿರಾಡಬೇಡಪ್ಪ, ನಿನಗೀಗ ಯೌವನವು ಬಂದಿದೆ. ಹೆಂಡತಿಯನ್ನು ಮಾಡಿಕೊಂಡು ಸುಖಪಡಬೇಕಾದ ವಯಸ್ಸು, ಧನದ ವಿಷಯದಲ್ಲಿ ನೀನೇನೂ ಚಿಂತಿಸಬೇಡ. ನಾನು ಯಾವ ರಾಜನನ್ನಾದರೂ ಕೇಳಿ ಹಣ ತರುತ್ತೇನೆ. ಗೃಹಸ್ಥನಾಗಿರಲು ಹಣವೂ ಪ್ರಧಾನವಾಗಿರಬೇಕಾದುದರಿಂದ, ಅದರಲ್ಲಿ ನಿನಗೇನೂ ಕೊರತೆಬಾರದಂತೆ ನಾನು ನೋಡಿಕೊಳ್ಳುತ್ತೇನೆ." ಎಂದನು.

"ಅಪ್ಪಾ, ಮದುವೆಯಿಂದ ಸುಖ ಬರುವುದೆಂಬ ಮಾತನ್ನು ನಾನು ಹೇಗೆ ನಂಬಲಿ? ಮದುವೆ ಮಾಡಿಕೊಂಡು ನಾನಾ ಕಷ್ಟಗಳನ್ನು ಅನುಭವಿಸುತ್ತ ಸಂಸಾರ ಕೂಪದಿಂದ ಮೇಲೇಳಲಾರದೆ ಕ್ಷೀಣಿಸಿ ಹೋಗುವವರನ್ನು ನೋಡುತ್ತಿದ್ದೇನಲ್ಲವೇ? ಅಂತಹ ದುಃಖಾಂಶವೇ ಹೆಚ್ಚಾಗಿರುವ ಸುಖವನ್ನು ಸುಖವೆಂದು ಹೇಳಬಹುದೇ? ಸಂಕಲೆಯಿಂದ ಬಿಡುಗಡೆ ಪಡೆಯಬಹುದಾದರೂ ಹೆಣ್ಣಿನ ಮಮಕಾರ ಪಾಶದಲ್ಲಿ ಸಿಕ್ಕಿಕೊಂಡವನಿಗೆ ಬಿಡುಗಡೆಯೇ ಇಲ್ಲ. ಅಂತಹ ಸುಖವನ್ನು ನಾನು ಹೇಗೆ ಇಷ್ಟಪಟ್ಟು ವರಿಸಿಕೊಳ್ಳಲಿ?" ಎಂದನು ಶುಕ.

"ಮಗನೇ, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ನಿರ್ಮಲವಾಗಿರಿಸಿಕೊಳ್ಳುವುದೇ ಮುಕ್ತಿಗೆ ಮಾರ್ಗ. ಮನಸ್ಸು ದೃಢವಾಗಿದ್ದುಬಿಟ್ಟರೆ ಯಾವುದೂ ಬಂಧನಗಳಾಗಿ ಬಂಧಿಸಲಾರವು. ನ್ಯಾಯವಾಗಿ ಧನವನ್ನು ಸಂಪಾದಿಸುತ್ತ, ಸುಳ್ಳು ಮಾತಾಡದೆ, ಶೌಚವನ್ನು ಬಿಡದೆ, ವಿಧ್ಯುಕ್ತವಾದ ಧರ್ಮ ಕರ್ಮಗಳನ್ನು ಮಾಡುತ್ತ ಗೃಹಸ್ಥನಾದವನು ಮುಕ್ತಿ ಪಡೆಯುತ್ತಾನೆ. ಕಂದಾ, ಗೃಹಸ್ಥನಾಗಿದ್ದು, ಅತಿಥಿಗಳನ್ನು ಆದರಿಸುತ್ತ ವಾನಪ್ರಸ್ಥರಿಗೂ, ಸಂಸಾರಿಗಳಿಗೂ ಸಹಾಯಕನಾಗಿರುತ್ತ, ಎಲ್ಲಾ ಬಗೆಯ ಧರ್ಮಗಳನೂ ಆಚರಿಸಿ, ಕಡೆಗೆ ಮುಕ್ತಿಯನ್ನು ಪಡೆಯಬಹುದು. ಇದನ್ನೆಲ್ಲ ತಿಳಿದುಕೊಂಡಿರುವುದರಿಂದಲೇ ವಸಿಷ್ಠ ಮೊದಲಾದ ಮಹರ್ಷಿಗಳೆಲ್ಲಾ

೪. ಶುಕ–ಜನಕ ಸಂವಾದ



ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದಾರೆ. ವೇದೋಕ್ತವಾದ ಕರ್ಮಗಳನ್ನು ನಡೆಯಿಸಬೇಕಾದರೆ ಗೃಹಸ್ಥಾಶ್ರಮ ಹೊರತು ಬೇರೊಂದು ಮಾರ್ಗವಿಲ್ಲ. ಬೇರೆ ಆಶ್ರಮಗಳು ಗೃಹಸ್ಥಾಶ್ರಮಕ್ಕೆ ಸಾಟಿ ಬಾರವು. ಅಷ್ಟುಮಾತ್ರವಲ್ಲದೆ ಪಂಚೇಂದ್ರಿಯಗಳ ಶಕ್ತಿ ಅತ್ಯಂತ ಬಲಿಷ್ಠವಾದುವು. ಹೆಂಡತಿ ಇಲ್ಲದವನನ್ನು ಅವುಗಳು ಅವಲೀಲೆಯಾಗಿ ಅಧೋಲೋಕಕ್ಕೆ ತಳ್ಳಿಬಿಡುತ್ತವೆ. ಅವನು ಎಷ್ಟು ದೊಡ್ಡ ಪಂಡಿತನಾದರೂ ಸರಿಯೇ! ಅಂತಹ ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕಾದರೆ ಮದುವೆ ಮಾಡಿಕೊಳ್ಳಬೇಕು. ಮುದುಕತನವು ಬಂದಾಗಲೇ ತಪಸ್ಸು ಮಾಡಬೇಕು. ಆದುದರಿಂದ ನೀನು ಮದುವೆಗೆ ಒಪ್ಪಿಕೋ" ಎಂದನು ವ್ಯಾಸ.

ಶುಕನು ತಂದೆಯ ವಾದನಗಳಿಗೆ ಆಮೋದವೀಯದೆ, ಸಂಸಾರವನ್ನು ನಿಂದಿಸುತ್ತ ಹೀಗೆಂದನು: "ಏನೇ ಹೇಳಿದರೂ ಮನೆಯೆಂಬುದೇ ಒಂದು ಉರುಳು ಹಗ್ಗ. ಹಣವಿಲ್ಲದೆಹೋದರೆ ಬೇಕಾದವರ ನಡುವಿನಲ್ಲೇ ಅವಮಾನ. ಹಣ ಸಂಪಾದನೆಗೆ ಎಷ್ಟೆಷ್ಟೋ ಕಷ್ಟಗಳು. ಮೂರು ಲೋಕಗಳನ್ನೂ ಪಾಲಿಸುವ ದೇವೇಂದ್ರನಿಗಿಂತಲೂ ಸನ್ಯಾಸಿಯೇ ಸುಖಿ. ಬ್ರಹ್ಮ ವಿಷ್ಣು ಮಹೇಶ್ವರರಿಗೆ ಮಾತ್ರ ಸುಖವೆಲ್ಲಿದೆ? ಯಾವ ದಾನವನು ಎಲ್ಲಿದ್ದಾನೋ, ಅವನನ್ನು ಹೇಗೆ, ಯಾವ ಉಪಾಯದಿಂದ ಕೊಲ್ಲುವುದೋ ಎಂಬ ಚಿಂತೆಯೇ ಅವರಿಗೆ. ಈ ಲೋಕದಲ್ಲಿ ಬಡವನಿಗೆ ಮಾತ್ರವಲ್ಲ, ಧನಿಕನಿಗೂ ಸುಖವಿಲ್ಲ. ಅಪ್ಪಾ, ನೀನು ನನಗೆ ಇಂಥ ಕಷ್ಟಗಳಿಗೆ ತಳ್ಳುವ ಮಾತು ಹೇಳುವುದನ್ನು ಬಿಟ್ಟು, ವಿಜ್ಞಾನ ಪ್ರದವಾದ ಮಾರ್ಗವನ್ನು ಹೇಳು. ಕೇಳುತ್ತೇನೆ."

ತನ್ನ ಮಗನ ಬುದ್ಧಿ ಕಡುವೈರಾಗ್ಯದಲ್ಲೇ ಇರುವುದೆಂದು ತಿಳಿದು ವ್ಯಾಸನು, "ಕಂದಾ, ಒಂದು ಕಾಲದಲ್ಲಿ ನಾನು ಮುಕ್ತಿಮಾರ್ಗದಾಯಕವಾದ ದೇವೀ ಭಾಗವತವನ್ನು ರಚಿಸಿದೆನು. ಅದನ್ನು ಓದಿ ನೀನು ಜ್ಞಾನಿಯಾಗಬಹುದು," ಎಂದು ಆ ದೇವೀಭಾಗವತವನ್ನು ಕುರಿತು ಹೀಗೆ ವಿವರಿಸಿದನು:

ವಿಷ್ಣುವು ವಟಪತ್ರದ ಮೇಲೆ ಮಗುವಾಗಿರುವಾಗ, "ನಾನಿಲ್ಲಿ ಈ ಮಗುವಿನ ರೂಪದಲ್ಲಿ ಏಕಿರುತ್ತೇನೆ? ನನ್ನನ್ನು ಸೃಷ್ಟಿಸಿದವರು ಯಾರು? ಈ ವಿಷಯ ನನಗೆ ಹೇಗೆ ತಿಳಿಯುತ್ತದೆ? ತಿಳಿಸುವವರು ಯಾರು?" ಎಂದು ಚಿಂತಿಸಿಕೊಂಡಿದ್ದನು. ಅದನ್ನು ನೋಡಿ ಮಹಾದೇವಿ ಕನಿಕರಗೊಂಡು ಅವನಿಗೆ ಅರ್ಧ ಶ್ಲೋಕವನ್ನು ಹೇಳಿ, "ಇದೇ ಸಮಸ್ತವೂ. ನೀನು ಇದನ್ನು ತಿಳಿದುಕೊಂಡರೆ ನನ್ನನ್ನು ತಿಳಿದುಕೊಂಡಂತೆಯೇ" ಎಂದಳು.

ಬಾಲ ವಿಷ್ಣು ಆ ಅರ್ಧ ಶ್ಲೋಕವನ್ನು ಕೇಳಿದನೇ ಹೊರತು, ಅರ್ಥ ಮಾಡಿಕೊಳ್ಳಲಾರದೆಹೋದನು. ಪುನಃ ಆಲೋಚನೆ ಹರಿಯಿತು, "ಇದನ್ನು ನನಗೆ ಹೇಳಿದವರಾರು? ಹೆಣ್ಣೋ? ಗಂಡೋ? ಯಾವುದೂ

ಅಲ್ಲವೋ ?" ಎಂದು ಏನೂ ನಿರ್ಧರಿಸಲಾಗದೆ ಅವನು ಆ ಅರ್ಧ ಶ್ಲೋಕವನ್ನೇ ಪಠಿಸಲು ತೊಡಗಿ ಬೆಳೆಯುತ್ತಾ ಬಂದನು. ಅಷ್ಟರಲ್ಲಿ ಮಹಾದೇವಿ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿ, ಬಂಗಾರದ ಬಟ್ಟೆ ತೊಟ್ಟವಳಾಗಿ, ಕಿರುನಗುವನ್ನು ಸೂಸುತ್ತ, ತನ್ನಂತೆಯೇ ಇರುವ ಶಕ್ತಿದೇವತೆಯರನ್ನು ತನ್ನೊಂದಿಗಿಟ್ಟುಕೊಂಡು ವಿಷ್ಣುವಿನ ಇದಿರಿನಲ್ಲಿ ಪ್ರತ್ಯಕ್ಷಳಾದಳು.

ವಿಷ್ಣು ಆ ದಿವ್ಯ ದೃಶ್ಯವನ್ನು ನೋಡಿ ಏನೂ ಹೇಳಲಾಗದೆ ದಿಗ್ಭ್ರಾಂತನಾದನು. ಆಗ ದೇವಿ ಅವನೊಂದಿಗೆ, "ನೀನು ಸಗುಣನಾದವನು. ನಾನು ಸತ್ವಶಕ್ತಿ. ನಿನ್ನ ಹೊಕ್ಕುಳ ಕಮಲದಲ್ಲಿ ಬ್ರಹ್ಮನು ಹುಟ್ಟಿ ರಜೋಗುಣದವನಾಗಿ ಎಲ್ಲಾ ಲೋಕಗಳನ್ನೂ ಸೃಷ್ಟಿ ಮಾಡುವನು. ಅವನು ಮಾಡಿದ ಸೃಷ್ಟಿಗೆ ನೀನು ಪಾಲಕನಾಗಿರುವೆ. ಆ ಬ್ರಹ್ಮದೇವನ ಕಣ್ಣು-ಪಾಪೆಗಳ ನಡುವಿನಿಂದ, ಕ್ರೊಧವಶಾತ್ ರುದ್ರನು ಹುಟ್ಟುತ್ತಾನೆ. ಆ ರುದ್ರನು ತೀವ್ರವಾದ ತಪಸ್ಸು ಮಾಡಿ, ಅದರ ಮೂಲಕ ತಾಮಸಗುಣ ಪಡೆದವನಾಗಿ, ಪ್ರಳಯ ಕಾಲದಲ್ಲಿ ಬ್ರಹ್ಮನು ಸೃಷ್ಟಿಸಿದ ಪ್ರಪಂಚವನ್ನೆಲ್ಲಾ ನಾಶ ಮಾಡಿಬಿಡುತ್ತಾನೆ. ನೀನು ನನ್ನ ಸಹಾಯದಿಂದಲೇ ಪ್ರಪಂಚವನ್ನು ಪೋಷಿಸಬೇಕಾಗಿದೆಯಪ್ಪಾ. ಆದುದರಿಂದ ಸತ್ವಶಕ್ತಿಯಾದ ನನ್ನನ್ನು ನೀನು ಧರಿಸಿಕೊಳ್ಳಬೇಕು. ನಾನು ಯಾವಾಗಲೂ ನಿನ್ನ ವಕ್ಷಸ್ಥಳದಲ್ಲಿಯೇ ಇರುತ್ತೇನೆ. ಅರ್ಥವಾಯಿತೆ ?" ಎಂದಳು,

ಅದಕ್ಕೆ ವಿಷ್ಣು ಅವಳನ್ನು ನೋಡಿ, "ಆಯಿತು. ಒಂದು ವಿಷಯ ಗೊತ್ತಾಗಲಿಲ್ಲ. ಅದೇನೆಂದರೆ ನಾನೊಂದು ಶ್ಲೋಕವನ್ನು ಕೇಳಿದೆನು. ಅದನ್ನು ನಾನು ಹೇಗೆ ಕೇಳಿದೆನೋ ತಿಳಿಯಲಿಲ್ಲ. ನೀನೇ ತಿಳಿಸಬೇಕು" ಎಂದನು ವಿಷ್ಣು. "ಹೇಳುತ್ತೇನೆ ಕೇಳು. ನೀನು ನನ್ನನ್ನು ಸಗುಣಳೆಂದುಕೊಂಡು ನೋಡು



ತ್ತಿರುವಿ, ಹಾಗಲ್ಲ ನಾನು. ನಿನಗೆ ಆ ಅರ್ಧ ಶ್ಲೋಕವನ್ನು ಹೇಳಿದವಳು ನಿರ್ಗುಣಸ್ವರೂಪಿಣಿಯಾದ ಪರದೇವತೆ. ಇದು ಭಾಗವತವೆಂಬ ಹೆಸರಿರುವ ಮಂತ್ರ. ಪರದೇವತೆ ನಿನ್ನ ಮೇಲಿನ ಅನುಗ್ರಹದಿಂದಲೇ ನಿನಗೆ ಈ ಮಂತ್ರವನ್ನು ಉಪದೇಶಿಸಿದಳು. ಇದನ್ನು ಬಿಡದೆ ಪಠಿಸುತ್ತಾ ಇದ್ದರೆ ಶುಭಪರಂಪರೆಗಳೇ ನಡೆಯುತ್ತವೆ." ಎಂದು ಹೇಳಿ ಮಹಾದೇವಿ ಮಾಯವಾದಳು. ಮುಂದೆ ವಿಷ್ಣು ಆ ಮಂತ್ರದ ಬಲದಿಂದಲೇ ಮಧುಕೈಟಭರನ್ನು ಕೊಂದು, ಆ ರಾಕ್ಷಸರಿಗೆ ಭಯಪಟ್ಟು ತನಗೆ ಶರಣಾಗತನಾದ ಬ್ರಹ್ಮನಿಗೆ ಅದನ್ನು ಉಪದೇಶಿಸಿದನು. ಬ್ರಹ್ಮನು ನಾರದನಿಗೂ ನಾರದನು ವ್ಯಾಸ ಮಹರ್ಷಿಗೂ ಹೇಳಿದನು.

ವ್ಯಾಸ ಅದನ್ನು ಶುಕನಿಗೆ ಉಪದೇಶ ಮಾಡಿ, "ಕಂದಾ, ಇದನ್ನೇ ನಾನು ಅನೇಕ ಸಂಹಿತೆಗಳಾಗಿ ವಿಸ್ತರಿಸಿ ರಚಿಸಿದ್ದೇನೆ." ಎಂದನು. ತಂದೆ ಉಪದೇಶಿಸಿದ ಆ ದಿವ್ಯ ಮಂತ್ರವನ್ನು ಪಠಿಸುತ್ತಾ



ಶುಕನು ಆ ಆಶ್ರಮದಲ್ಲೇ ಇದ್ದುಬಿಟ್ಟನು. ಆದರೆ ಶುಕನ ಮುಖದಲ್ಲಿ ಏನೋ ವಿಚಾರವು ತುಂಬಿರು ವಂತೆ ವ್ಯಾಸನಿಗೆ ತೋರಿತು. ಅದನ್ನು ನೋಡಿ ಅವನು, "ಏನಪ್ಪಾ, ನೀನು ನನ್ನ ಮಗನಾಗಿದ್ದು ವಿಜ್ಞಾನವನ್ನು ಕುರಿತು ಇಷ್ಟೊಂದು ವಿಚಾರ ಮಾಡುವುದೇಕೆ? ನನ್ನ ಮಾತುಗಳು ನಿನಗೆ ಹಿಡಿಸದೆ ಹೋದರೆ ಇನ್ನೊಂದು ಕೆಲಸ ಮಾಡು. ಮಿಥಿಲಾ ನಗರದಲ್ಲಿ ಜನಕನೆಂಬ ರಾಜನಿದ್ದಾನೆ. ಅವನು ಪರಮ ಶಾಂತನಾಗಿಯೂ ಮಹಾಜ್ಞಾನಿಯಾಗಿಯೂ ಇರು ವವನು. ನೀನು ಅವನನ್ನು ಕೇಳಿ ನಿನ್ನ ಎಲ್ಲಾ ಸಂದೇಹವನ್ನೂ ತೀರಿಸಿಕೊಳ್ಳಬಹುದು." ಎಂದನು.

"ನಿಮ್ಮ ಮಾತು ವಿಚಿತ್ರವಾಗಿದೆ! ರಾಜ್ಯ ಪಾಲನೆಯೆಂದರೆ ಎಲ್ಲಾ ಪಾಪಗಳಿಗೂ ಮೂಲ ವಲ್ಲವೆ? ಹಾಗಿರುವಾಗ ಈ ಜನಕನು ಹೇಗೆ ಜ್ಞಾನಿ ಯಾದನೆಂಬುದನ್ನು ನೋಡಲೇಬೇಕು. ಅದೂ ಒಳ್ಳೆಯದೇ. ಹೋಗಿ ಬರುತ್ತೇನೆ ಎಂದನು ಶುಕ."

"ಹೋಗಿಬಾ ಕುಮಾರಾ! ನನ್ನ ಪಂಚಪ್ರಾಣಗಳೂ ನಿನ್ನ ಮೇಲೆಯೇ ಇವೆ. ನಿನ್ನ ಎಲ್ಲಾ ವಿಧದ ಸಂಶಯ ಗಳನ್ನೂ ತೀರಿಸಿಕೊಂಡು ಆ ಕೂಡಲೇ ತಿರುಗಿ ಬಂದು ಬಿಡು." ಎಂದು ಹೇಳಿ ವ್ಯಾಸನು ತನ್ನ ಮಗನನು ಕಳುಹಿಸಿಕೊಟ್ಟನು.

## ಮಿಥಿಲೆಯಲ್ಲಿ ಶುಕ

ಶುಕನು ತಂದೆಯ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅಪ್ಪಣೆ ಪಡೆದು ಮಿಥಿಲಾನಗರಕ್ಕೆ ಹೊರಟು, ದಾರಿಯಲ್ಲಿ ತಗಲಿದ ಅನೇಕ ದೇಶ ಗಳನ್ನೂ, ಅರಣ್ಯಗಳನ್ನೂ, ಪರ್ವತಗಳನ್ನೂ, ಕ್ಷೇತ್ರ ಗಳನ್ನೂ, ಋಷ್ಯಾಶ್ರಮಗಳನ್ನೂ, ನೋಡುತ್ತ, ಎರಡು ವರುಷಗಳಲ್ಲಿ ಮೇರು ಪರ್ವತ ಪ್ರಾಂತ ವನ್ನು ದಾಟಿ, ಹಿಮಾಲಯ ಪ್ರಾಂತವನ್ನು ಮತ್ತೊಂದು ವರ್ಷದಲ್ಲಿ ದಾಟಿ, ಮಿಥಿಲಾ ನಗರ ವನ್ನು ತಲಪಿಸಿದನು. ನಗರ ದ್ವಾರದ ಹತ್ತಿರ ಅವನು ವಿಚಿತ್ರಗಳನ್ನು ನೋಡುವವನಂತೆ ನಿಂತಿರಲು, ದ್ವಾರ ಪಾಲಕನೊಬ್ಬನು ಅವನನ್ನು ನೋಡಿ, "ಯಾರು ನೀನು? ಏನು ಕೆಲಸದ ಮೇಲೆ ಹೊರಟಿರುವೆ?" ಎಂದು ಕೇಳಿದನು.

ಶುಕನು ಅವನಿಗೆ ಯಾವ ಪ್ರತ್ಯುತ್ತರವನೂ ಕೊಡದೆ ನಗರದ್ವಾರದ ಹೊರಗೆ ಕಲ್ಲಿನ ಪ್ರತಿಮೆ ಯಂತೆ ಸುಮ್ಮನೆ ಕುಳಿತನು.

"ಹಾಗೆ ಕುಳಿತರೆ ಏನು ಅರ್ಥ? ಅನುಮತಿ ಇಲ್ಲದೆ ಒಳಗೆ ಹೋಗಬಹುದೆಂದು ಅಂದು ಕೊಂಡೆಯಾ? ನಿನ್ನನ್ನು ನೋಡಿದರೆ ವೇದಾಧ್ಯಯನ ಮಾಡಿದ ಬ್ರಾಹ್ಮಣನ ಹಾಗೆ ಕಾಣುವೆ. ನಿನ್ನ ಕುಲ ಗೋತ್ರಗಳನ್ನೂ, ರಾಜರೊಂದಿಗೆ ನಿನಗೇನು ಕೆಲಸ ವೆಂಬುದನ್ನೂ ಹೇಳದಿದ್ದರೆ ಒಳಗೆ ಹೋಗಲು ಸಾಧ್ಯವಿಲ್ಲ." ಇಲ್ಲಿಯ ನಿಯಮವೇ ಹಾಗಿದೆ ಎಂದು ದ್ವಾರಪಾಲಕನು ಮತ್ತೊಮ್ಮೆ ಹೇಳಿದನು. ಅದಕ್ಕೆ ಶುಕನು, "ನಾನು ರಾಜನ ಹತ್ತಿರ ಯಾವ

ಕೆಲಸಕ್ಕಾಗಿ ಬಂದೆನೋ ಆ ಕೆಲಸವನ್ನು ದ್ವಾರದ ಹತ್ತಿರ ನೀನೇ ತೀರಿಸಿದೆ. ಇನ್ನು ವಿಚಾರವೇಕೆ? ನಾನು ಯಾವ ಕಷ್ಟಗಳನ್ನೂ ಲಕ್ಷ್ಯಮಾಡದೆ ಮೇರು ಪರ್ವತವನ್ನು ದಾಟಿ, ಹಿಮಾಲಯವನ್ನು ದಾಟಿ ಈ ರಾಜನನ್ನು ನೋಡಬೇಕೆಂಬ ದುರಾಶೆಯಿಂದ ಬಂದೆನಲ್ಲ! ಅದು ನನ್ನದೇ ತಪ್ಪು. ಸಾಧಾರಣ ವಾಗಿ ಮನುಷ್ಯರು ಹಣಕ್ಕಾಗಿ ದೇಶದೇಶಗಳನ್ನು ತಿರುಗುತ್ತಾರೆ. ನನಗೆ ಧನದ ಆಶೆ ಇಲ್ಲದಿದ್ದರೂ ನನ್ನ ಕರ್ಮದಿಂದ ನಾನು ದೇಶಗಳನ್ನೆಲ್ಲಾ ತಿರುಗಿದೆ. ಎಲ್ಲಿಯ ಮೇರುಪರ್ವತ? ಎಲ್ಲಿಯ ಮಿಥಿಲೆ? ಬರಿ ಗಾಲಿನಲ್ಲಿ ನಡೆಯುತ್ತ ಇಷ್ಟುದೂರ ಬಂದೆನೆಂದರೆ ಅದು ನನ್ನ ಪ್ರಾರಬ್ಧಕರ್ಮ ಹೊರತು ಫಲವೇನಾ ದರೂ ಇದೆಯೆ? ನಾನು ಪಟ್ಟ ಇಷ್ಟೆಲ್ಲಾ ಶ್ರಮಕ್ಕೆ ಫಲಿತವೇನೆಂದರೆ ಯಾವನೋ ಸೇವಕನೊಬ್ಬ ಮುಂದೆ ಹೋಗದಂತೆ ತಡೆಯುತ್ತಾನೆ! ಬುದ್ಧಿನೀತಿ ಕಲಿಸುತ್ತಾನೆ!" ಎಂದನು.

ಇವನಾವನೋ ಮಹಾತ್ಮನಾಗಿರಬೇಕೆಂದು ದ್ವಾರ ಪಾಲಕನಿಗೆ ಗೊತ್ತಾಯಿತು. ಅವನು ಶುಕನ ಹತ್ತಿರ ಬಂದು ವಿನಯದಿಂದ ಬಾಗಿ ಕೈಮುಗಿದು, "ಅಡ್ಡ ತಡೆದುದಕ್ಕೆ ನನ್ನನ್ನು ದಯವಿಟ್ಟು ಮನ್ನಿಸಿರಿ. ಒಳಗೆ ಹೋಗಿರಿ. ನಿಮ್ಮಂಥವರನ್ನು ಯಾರು ತಾನೇ ತಡೆಯುವರು?" ಎಂದನು.

"ನಿನ್ನ ವಿಧಿಯನ್ನು ನೀನು ನೆರವೇರಿಸಿದರೆ ಅದು ತಪ್ಪು ಹೇಗಾದೀತು? ನಿನ್ನದೇನೂ ತಪ್ಪಿಲ್ಲ. ರಾಜನು ನಿನಗೆ ಹಾಗೆ ಆಜ್ಞೆಮಾಡಿದ್ದಾನೆ. ನಿಜಕ್ಕೂ ರಾಜನದೂ ತಪ್ಪು ಇಲ್ಲ. ಆಲೋಚನೆ ಮಾಡದೆ ಇಲ್ಲಿಗೆ ಬಂದದ್ದೇ ತಪ್ಪು. ಅದು ನನ್ನದೇ ತಪ್ಪು!" ಎಂದನು ಶುಕ.

ದ್ವಾರಪಾಲಕನು ಅವನನ್ನು ಒಳಗೆ ಹೋಗು ವಂತೆ ಪುನಃ ಪ್ರಾರ್ಥಿಸಿದನು. ಶುಕನು ಒಳಗೆ ಹೋಗಿ ರಾಜಮಂದಿರವನ್ನು ಮುಟ್ಟಿದಾಗ ಅಲ್ಲಿರುವ ದ್ವಾರ



ಪಾಲಕನು ಅಡ್ಡ ತಡೆದನು. ಶುಕನು ಶಿಲೆಯಂತ ಅಲ್ಲಿಯೇ ಸುಮ್ಮನೆ ನಿಂತಿರುವಾಗ, ಆ ದಾರಿಯಾಗಿ ಒಬ್ಬ ಮಂತ್ರಿ ಬಂದು ಶುಕನನ್ನು ನೋಡಿ ನಮ ಸ್ಕಾರಮಾಡಿ, ತನ್ನೊಂದಿಗೆ ಕರೆದುಕೊಂಡು ಸುಂದರ ವಾದ ರಾಜೋದ್ಯಾನಕ್ಕೆ ಹೋದನು. ಅಲ್ಲಿ ಅವನು ಶುಕನಿಗೆ ಅತಿಥಿಸತ್ಕಾರಗಳನ್ನು ಮಾಡಿ, ಎಲ್ಲಾ ಶೃಂಗಾರ ಕಲೆಗಳಲ್ಲಿಯೂ ಅಸಾಧಾರಣ ಪ್ರಜ್ಞೆ ಯುಳ್ಳವರಾದ, ಅಪ್ಸರಸಿಯರನು ಮೀರಿಸುವ ಸುಂದರಿಯರಾದ, ವೇಶ್ಯಾಸ್ತ್ರೀಯರನ್ನು ಕರೆಯಿಸಿ ಶುಕನಿಗೆ ಪರಿಚರ್ಯೆ ಮಾಡಿಸುವ ಏರ್ಪಾಡು ಮಾಡಿ ಹೊರಟುಹೋದನು. ಶುಕನು ಅಲ್ಲಿಯೇ ವಿಶ್ರಮಿಸಿಕೊಂಡಿದ್ದನು.

ಅವನ ಸೇವೆಗಾಗಿ ನಿಯೋಜಿಸಲ್ಪಟ್ಟ ವೇಶ್ಯೆ ಯರು ಅವನಿಗೆ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ಕೊಟ್ಟು, ಅವನನ್ನು ಸಂತೋಷಪಡಿಸಿದರು. ಅವನ ಅಂದಚೆಂದ ಸೌಕುಮಾರ್ಯಗಳಿಗೆ ಅವರೇ ಮೋಹಿಸಿ,



ತಮ್ಮ ಮೋಹವನ್ನು ಅವನ ಮುಂದೆ ತೋರಿಸಿದರು. ಆದರೆ ಶುಕನು ಸ್ವಲ್ಪವೂ ಚಲಿಸಲಿಲ್ಲ. ಅವನು ಇಂದ್ರಿಯಗಳನ್ನು ಜಯಿಸಿದವನೆಂಬುದನ್ನು ತಿಳಿದು ಆ ಸ್ತ್ರೀಯರು, ಶೃಂಗಾರ ಚೇಷ್ಟೆಗಳನ್ನು ಬಿಟ್ಟು, ಭಯಭಕ್ತಿಯಿಂದ ಸಾಧಾರಣ ಸೇವೆಗಳನ್ನು ಮಾಡುತ್ತ, ರಾತ್ರಿ ಅವನು ಮಲಗಲು ಒಳ್ಳೆಯ ಹಾಸಿಗೆ ಹಾಸಿಕೊಟ್ಟರು. ಶುಕನು ಆ ರಾತ್ರಿ ನಿದ್ರೆ ಮಾಡಿ ಬೆಳಗಿನ ಜಾಮದಲ್ಲಿ ಎದ್ದನು. ಆಗ ಅವನ ಪ್ರಯಾಣದ ಬಳಲಿಕೆಗಳು ಕಡಮೆಯಾಗಿದ್ದುವು. ಬೆಳಗಾಗುವವರೆಗೂ ಧ್ಯಾನದಲ್ಲಿದ್ದನು. ಆಮೇಲೆ ಕಾಲಕೃತ್ಯಗಳನ್ನು ತೀರಿಸಿ ಮತ್ತೆ ತಪಸ್ಸಮಾಧಿಯಲ್ಲಿ ಕುಳಿತುಬಿಟ್ಟನು.

### ಶುಕ-ಜನಕ ಸಂವಾದ

ಶುಕನು ತನ್ನ ಮಂದಿರಕ್ಕೆ ಬಂದಿರುವ ಸಂಗತಿಯನ್ನು ತಿಳಿದು ಜನಕಮಹಾರಾಜನು ತನ್ನ ಪುರೋಹಿತನೊಂದಿಗೆ ಶುಕನ ಬಳಿಗೆ ಬಂದು, ಅರ್ಘ್ಯ ಕೊಟ್ಟು ಕುಶಲಪ್ರಶ್ನೆಗಳನ್ನು ಮಾಡಿದನು. ಒಂದು ಗೋವನ್ನು ಶುಕನಿಗೆ ಕೊಟ್ಟು ಗೌರವಿಸಿದನು. ಶುಕನು ಕೂಡ ಜನಕರಾಜನನ್ನು ಗೌರವದಿಂದ ಮಾತಾಡಿಸಿದನು.

ಶುಕನ ಆಗಮನಕ್ಕೆ ಕಾರಣವೇನೆಂದು ಜನಕನು ಕೇಳಲು, ಶುಕನು ಹೀಗೆಂದನು: "ರಾಜಾ, ನಾನು ತಂದೆಯ ಆಜ್ಞೆಯ ಮೇರೆಗೆ ಇಲ್ಲಿಗೆ ಬಂದೆನು. ನನ್ನ ತಂದೆ ವ್ಯಾಸರು ನನಗೆ ಉಪನಯನ, ವಿದ್ಯಾಭ್ಯಾಸಗಳನ್ನೆಲ್ಲಾ ಮಾಡಿಸಿದರು. ಆದಾದ ಮೇಲೆ ನನ್ನನ್ನು ಮದುವೆ ಮಾಡಿಕೊಳ್ಳಲು ಹೇಳಿದರು. ನಾನು ಸಂಸಾರಬಂಧಗಳಿಗೆ ಹೆದರಿ ಮದುವೆ ಬೇಡವೆಂದು ಹೇಳಿದೆ. ಧರ್ಮಾರ್ಥಕಾಮಮೋಕ್ಷಗಳನ್ನು ಸಾಧಿಸಲಿಕ್ಕೆ ಗೃಹಸ್ಥಾಶ್ರಮವೇ ಉತ್ತಮ ಮಾರ್ಗವೆಂದು ಅವರು ಹೇಳುತ್ತಾರೆ. ನಾನು ಅಲ್ಲವೆಂದೇ ಸಾಧಿಸಿದ್ದೇನೆ. ಕಡೆಗೆ ಅವರು ಮಿಥಿಲಾನಗರಕ್ಕೆ ಹೋಗಿ ಜನಕಮಹಾರಾಜನ ದ್ವಾರಾ ನಿನ್ನ ಅನುಮಾನಗಳನ್ನು ತೀರಿಸಿಕೋ ಎಂದು ಹೇಳಿದುದರಿಂದ, ನಾನು ಮೇರುಪರ್ವತ, ಹಿಮಾಲಯಗಳನ್ನು ದಾಟಿ ಇಲ್ಲಿಗೆ ಬಂದಿದ್ದೇನೆ. ಮುಖ್ಯವಾಗಿ ನಾನು ಮೋಕ್ಷವನ್ನು ಕೋರುತ್ತೇನೆ. ಹಾಗಾದರೆ ನನ್ನ ಈಗಿನ ಕರ್ತವ್ಯವೇನು ?"

ಶುಕನ ಮಾತಿಗೆ ಜನಕನು ತಲೆದೂಗುತ್ತ ಹೀಗೆಂದನು: "ನೀನು ನಿಜಕ್ಕೂ ಮೋಕ್ಷವನ್ನು ಬಯಸುವಿಯಾದರೆ ಮೊದಲು ಉಪನಯನ ಮಾಡಿಕೊಂಡು, ವೇದಾದಿವಿದ್ಯೆಗಳನ್ನು ಕಲಿತು, ಗುರುದಕ್ಷಿಣೆ ಕೊಟ್ಟು, ಗುರುವಿನ ಅಪ್ಪಣೆ ಪಡೆದು ಮದುವೆ ಮಾಡಿಕೊಂಡು, ಹೆಂಡತಿಯೊಂದಿಗೆ, ಆಚಾರನಿಯಮಗಳನ್ನು ಪಾಲಿಸುತ್ತಾ, ಕರ್ಮಗಳನ್ನು ಮಾಡುತ್ತಾ ಗೃಹಸ್ಥಧರ್ಮದಲ್ಲಿ ಸಂಸಾರಮಾಡುತ್ತ ಮಕ್ಕಳನ್ನೂ ಮೊಮಕ್ಕಳನ್ನೂ ಪಡೆಯಬೇಕು. ಆಮೇಲೆ ಅರಣ್ಯಕ್ಕೆ ಹೋಗಿ ವಾನಪ್ರಸ್ಥಾಶ್ರಮ

ವನ್ನು ಕೈಕೊಂಡು, ಕಾಮಕ್ರೋಧಾದಿಗಳನ್ನು ತ್ಯಜಿಸಿ, ಅಗ್ನಿಗಳನ್ನು ತನ್ನಲ್ಲೇ ಆವಹಿಸಿಕೊಳ್ಳುವಂತೆ ಮಾಡಿ, ವೈರಾಗ್ಯವನ್ನು ಅವಲಂಬಿಸಿ ಹೆಂಡತಿಯನ್ನೂ ಮಕ್ಕಳನ್ನೂ, ಎಲ್ಲಾ ಮಮಕಾರಗಳನ್ನೂ ಬಿಟ್ಟು ಸನ್ಯಾಸವನು ಸ್ವೀಕರಿಸಬೇಕು. ಅದಾವುದನ್ನೂ ಮಾಡದೆ ಸನ್ಯಾಸವನ್ನು ಸ್ವೀಕರಿಸುವುದೆಂಬ ಮಾತು ಅಸಂದರ್ಭವಾಗಿದೆ. ಪೂರ್ತಿವೈರಾಗ್ಯವು ಉಂಟಾದಾಗಲೇ ಸನ್ಯಾಸವನ್ನು ತೆಗೆದುಕೊಳ್ಳಬೇಕಷ್ಟೆ. ಮಾನವನಿಗೆ ನಲುವತ್ತೆಂಟು ಸಂಸ್ಕೃತಿಗಳಿವೆ. ಅದರಲ್ಲಿ ನಲುವತ್ತು ಗೃಹಸ್ಥನಿಗೆ. ಎಂಟು ಸನ್ಯಾಸಿಗೆ."

ಆಗ ಶುಕನು ಹೀಗೆ ಪ್ರಶ್ನೆಮಾಡಿದನು: "ರಾಜಾ, ಮನಸ್ಸಿನಲ್ಲಿ ವೈರಾಗ್ಯವು ಬೇರೂರಿರುವಾಗ ಸನ್ಯಾಸ ತೆಗೆದುಕೊಳ್ಳುವುದರಲ್ಲಿ ತಪ್ಪೇನಿದೆ ?"

"ಈ ಮಾತು ನಂಬತಕ್ಕುದಲ್ಲ. ಏಕೆಂದರೆ ಒಮ್ಮೆಗೇ ಇಂದ್ರಿಯಗಳನ್ನು ಜಯಿಸಲು ಸಾಧ್ಯವಿಲ್ಲ. ಎಷ್ಟೇ ದೊಡ್ಡ ಪಂಡಿತನಾದರೂ ಅವುಗಳಿಗೆ ಬಾಗಿ ಹೋಗಿಬಿಡುವನು. ಇನ್ನು ಸಾಮಾನ್ಯ ಮನುಷ್ಯನ ಸಂಗತಿ ಹೇಳುವುದೇನಿದೆ ? ಮನುಷ್ಯನಿಗೆ ಅಡಿಗಡಿಗೂ ವಿಕಾರಗಳೇ. ರುಚಿಗಳ ಆಶೆ, ನಿದ್ರೆಯ ಸುಖ, ಸೊಗಸುಗಳ ಕೋರಿಕೆ, ಪುತ್ರಾಕಾಂಕ್ಷೆ ಮುಂತಾದುವೆಲ್ಲಾ ಸನ್ಯಾಸಿಗೆ ತೀರುವ ಬಗೆ ಹೇಗೆ ? ಕೋರಿಕೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಹೇಗೆ ? ಆದುದರಿಂದಲೇ ಎಲ್ಲಾ ಭೋಗಗಳನ್ನೂ ಅನುಭವಿಸಿದ ಮೇಲೆಯೇ ಬಿಟ್ಟುಬಿಡಬೇಕು. ಮುಂದಾಗಿಯೇ ಬಿಟ್ಟುಬಿಡುವುದೆಂದರೆ ಏನು ಅರ್ಥ ? ಎತ್ತರದ ಸ್ಥಳದಲ್ಲಿ ಮಲಗಿದವನು ಒಂದು ದಿನ ಕೆಳಗೆ ಬಿದ್ದುಬಿಡುತ್ತಾನೆ. ಯಾವನಾದರೂ ಸನ್ಯಾಸವನ್ನು ಸ್ವೀಕರಿಸಿ, ವೈರಾಗ್ಯದಿಂದಿರಲು ಸಾಧ್ಯವಾಗದೆ, ಭೋಗಗಳ ಮೇಲೆ ಆಸಕ್ತಿ ಉಂಟಾಗಿಬಿಟ್ಟರೆ, ಅವನಿಗೆ ಉಭಯಭ್ರಷ್ಟತೆಯಾಗಿ ನರಕವೇ ಗತಿ! ಜ್ಞಾನವನ್ನು ಕ್ರಮವಾಗಿ ಸಂಪಾದಿಸುತ್ತ ಕಡೆಗೆ ಸನ್ಯಾಸಿಯಾಗಬೇಕು. ಮನಸ್ಸು ಸುಲಭದಲ್ಲಿ ಬಾಗಿ ಬಿಡುವಂತಹದಲ್ಲ. ಅದನ್ನು ಸಾವಕಾಶವಾಗಿ ಸರಿಯಾದ ದಾರಿಗೆ ತರಬೇಕು. ಗೃಹಸ್ಥನಾಗಿರುತ್ತ ಶಾಂತತೆಯನ್ನು ಅವಲಂಬಿಸಿ, ಲಾಭ ಬಂದರೆ ಉಬ್ಬಿ ಹೋಗದೆ, ನಷ್ಟವಾದರೆ ಕುಗ್ಗಿ ಇಳಿಯದೆ ತ್ಯಾಗಮಯವಾದ ಜೀವನವನ್ನು ನಡೆಸುವವನಿಗೆ ಕಡೆಗೆ ಮೋಕ್ಷವು ಸಿಗುತ್ತದೆ. ನನ್ನನ್ನು ನೋಡು. ನಾನು ಎಷ್ಟು ಭೋಗಗಳನ್ನಾದರೂ ಅನುಭವಿಸುವವನು. ಯಥೇಚ್ಛೆಯಾಗಿ ಜೀವಿಸುವವನು. ಆದರೂ ಮನಸ್ಸನ್ನು ಬಹುನಿರ್ಮಲವಾಗಿ ಇಟ್ಟುಕೊಂಡಿದ್ದೇನೆ. ಸತ್ತು ಮೋಕ್ಷಕ್ಕೆ ಹೋಗುತ್ತೇನೆ. ನೀನು ಕೂಡಾ ಹಾಗೆಯೇ ಜೀವಿಸಬಹುದಷ್ಟೆ ?" ಎಂದು ಜನಕನು ಶುಕನಿಗೆ ಉಪದೇಶ ಮಾಡಿದನು.





# ನಗರದಲ್ಲಿ ಉದ್ಯೋಗ

ಒಂದು ಊರಿನಲ್ಲಿ ವೆಂಕಟಾಚಲನೂ ಶೇಷಾದ್ರಿಯೂ ಸ್ನೇಹಿತರಾಗಿದ್ದು ವಿದ್ಯಾಭ್ಯಾಸಮಾಡಿ ಮುಗಿಸಿದರು. ಅವರಿಬ್ಬರಿಗೂ ನಗರದಲ್ಲಿ ಉದ್ಯೋಗಮಾಡಬೇಕೆಂದು ಆಸೆಯಾಗಿದ್ದಿತು.

ಅದನ್ನು ಕುರಿತು ಅನ್ವೇಷಣೆ ನಡೆಸಿದಾಗ, ನಗರಪಾಲಕ ಸಂಸ್ಥೆಯಲ್ಲಿ ಖಾಲೀ ಜಾಗಗಳಿರುವಂತೆ ಗೊತ್ತಾಯಿತು. ಇಬ್ಬರೂ ಅಲ್ಲಿಗೆ ಅರ್ಜಿಗಳನ್ನು ಬರೆದು ಕಳುಹಿಸಿದರು. ಇಂತಹ ದಿನ ಉದ್ಯೋಗಕ್ಕೆ ಆಯ್ಕೆ ನಡೆಯುವುದೆಂದು, ಇಬ್ಬರಿಗೂ ಅಲ್ಲಿಂದ ಪ್ರತ್ಯುತ್ತರ ಬಂದಿತು.

ವೆಂಕಟಾಚಲನ ತಂದೆಗೆ ಒಬ್ಬ ಸ್ನೇಹಿತನಿದ್ದ. ಆ ಸ್ನೇಹಿತನಿಗೆ ಬೇಕಾದ ಮುರಹರಿ ಎಂಬವನು ನಗರದಲ್ಲಿದ್ದ. ಆದುದರಿಂದ ತಂದೆ ವೆಂಕಟಾಚಲನೊಂದಿಗೆ, ನಗರಕ್ಕೆ ಹೋಗಿ ಛತ್ರ ಚಾವಡಿಗಳಲ್ಲಿ ಇಳಿದುಕೊಳ್ಳುವ ಬದಲಿಗೆ, ಮುರಹರಿಯ ಮನೆಗೇ ಹೋಗುವಂತೆ ಹೇಳಿ, ತನ್ನ ಸ್ನೇಹಿತನಿಂದ ಮುರಹರಿಗೆ ಒಂದು ಕಾಗದವನ್ನೂ ಬರೆಯಿಸಿ ಕೊಟ್ಟನು.

ವೆಂಕಟಾಚಲನೇನೋ ತಂದೆಯ ಅಭಿಮತದಂತೆ ಮುರಹರಿಯ ಮನೆಗೆ ಹೋಗಲಿಕ್ಕೆ ನಿಶ್ಚಯಿಸಿದನು. ಆದರೆ ಶೇಷಾದ್ರಿಗೆ ಗುರುತು ಪರಿಚಯವಿಲ್ಲದವರಲ್ಲಿ ಇಳಿದುಕೊಳ್ಳಲು ಸ್ವಲ್ಪವೂ ಇಷ್ಟವಿಲ್ಲದುದರಿಂದ, ತಾನು ಛತ್ರದಲ್ಲಿಯೇ ಇಳಿದುಕೊಳ್ಳುವೆನೆಂದನು.

ಅವರು ನಗರಕ್ಕೆ ಉದ್ಯೋಗಸ್ಥರ ಆಯ್ಕೆಗೆ ನಿಶ್ಚಯಿಸಲ್ಪಟ್ಟ ದಿನದ ಮುಂಚಿನ ದಿನವೇ ಹೊರಡಬೇಕೆಂದಿದ್ದರು. ಕಾರಣಾಂತರಗಳಿಂದ ಹೊರಡುವುದು ನಿಧಾನವಾಗಿ ಆ ದಿನ ಬೆಳಂಜಾವದ ಹೊತ್ತಿಗೆ ನಗರವನ್ನು ತಲಪಿದರು. ಬೆಳಗಾದರೆ ಉದ್ಯೋಗಸ್ಥರ ಆಯ್ಕೆ.

ಶೇಷಾದ್ರಿ ಅವಸರವಸರವಾಗಿ ಛತ್ರವನ್ನು ಹುಡುಕುತ್ತಾ ಹೋದನು. ವೆಂಕಟಾಚಲನು ಕಾಗದದಲ್ಲಿ ಬರೆದುಕೊಂಡಿದ್ದ ವಿಳಾಸವನ್ನು ಹುಡುಕಿಕೊಂಡು ಸುಲಭದಲ್ಲಿಯೇ ಮುರಹರಿಯ ಮನೆಯನ್ನು ತಲಪಿದನು.

ಅವನು ಆ ಮನೆಯ ಬಾಗಿಲು ತಟ್ಟುವುದಕ್ಕೆ ಮೊದಲೇ, ಸುಮಾರು ನಲವತ್ತು ವಯಸ್ಸಿನ ಮನುಷ್ಯನೊಬ್ಬ, ದೂರ ಪ್ರಯಾಣಮಾಡುವವನ ಹಾಗೆ ಕೈಯಲ್ಲೊಂದು ಪೆಟ್ಟಿಗೆ ಹಿಡಿದುಕೊಂಡು ಹೊರಗೆ ಬಂದನು.

ಎಂ. ಕೆ. ಈಶ್ವರರಾವು

"ಮುರಹರಿಯವರ ಮನೆ ಇದೇ ಏನು?" ಎಂದು ಕೇಳಿದ ವೆಂಕಟಾಚಲ. "ಹೌದು. ಇದೇ. ನಾನೇ ಮುರಹರಿ. ನೀವುಯಾರು?" ಎಂದು ಆ ಮನುಷ್ಯ ವೆಂಕಟಾಚಲನನ್ನು ಅನುಮಾನವಾಗಿ ನೋಡುತ್ತ ಕೇಳಿದನು.

ವೆಂಕಟಾಚಲನು ತನ್ನ ವಿಷಯ ಹೇಳಿ ಕಾಗದ ಕೊಟ್ಟು "ಬೆಳಗಾದರೆ ಉದ್ಯೋಗಕ್ಕೆ ಪರೀಕ್ಷೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು. ಅಲ್ಲಿಗೆ ಹೋಗಬೇಕು ನನಗೆ" ಎಂದನು.

ಆ ಮನುಷ್ಯ ಕಾಗದದ ಮೇಲೆ ಕಣ್ಣೋಡಿಸಿ "ಒಳ್ಳೇದು. ನಾನು ಅವಸರವಾಗಿ ಹೊರಟಿದ್ದೇನೆ. ನನ್ನ ಅಣ್ಣನಿಗೆ ಸೌಖ್ಯವಿಲ್ಲವೆಂದು ವಾರ್ತೆ ಬಂತು. ಗಾಬರಿಯಲ್ಲಿ ಹೊರಟಿದ್ದೇನೆ. ಈ ಮನೆ ನಿಮ್ಮದೇ ಅಂದುಕೊಳ್ಳಿ. ಒಳಗೆ ಹೋಗಿ. ನಾಳೆ ಸಾಯಂಕಾಲ ಬರುತ್ತೇನೆ" ಎಂದು ಹೇಳಿ. ಕಾಗದವನ್ನು ಹಿಂದೆ ಕೊಟ್ಟು, ಬೇಗಬೇಗನೆ ಹೊರಟುಹೋದನು. ವೆಂಕಟಾಚಲನು ಮನೆಯೊಳಗೆ ಹೋದನು.

ದೊಡ್ಡ ಮನೆ. ಯಾರೂ ಇರಲಿಲ್ಲ. ವೆಂಕಟಾಚಲನು ನಡುಕೋಣೆಯಲ್ಲಿದ್ದ ಮಂಚವನ್ನು ಎಳೆದುಕೊಂಡು ಸ್ವಲ್ಪ ಮಲಗಿದನು. ಅವನಿಗೆ ನಿದ್ದೆ ಬಂತೂ ಇಲ್ಲ ಎಂಬ ಹೊತ್ತಿನಲ್ಲಿ ಯಾರೋ ದಡದಡನೆ ಬಾಗಿಲು ತಟ್ಟಿದ ಶಬ್ದಕ್ಕೆ ಮೆಟ್ಟಿಬಿದ್ದೆದ್ದನು. ಬಾಗಿಲು ತೆರೆದಾಗ ಬೆಳ್ಳಗೆ ಬೆಳಗಾಗಿತ್ತು. ಮನೆಯ ಹೊರಗೆ ಹತ್ತಾರು ಮಂದಿಗಳು ದೊಣ್ಣೆಕೋಲು ಹಿಡಿದುಕೊಂಡು ನಿಂತಿದ್ದರು. ಬಾಗಿಲು ತೆರೆದಕೂಡಲೇ ಅವರೆಲ್ಲ ಒಮ್ಮೆಗೇ ವೆಂಕಟಾಚಲನ ಮೇಲೆ ನುಗ್ಗಿ ಹಿಡಿದು ಅವನ ಕೈಗಳನ್ನು ಹಿಮ್ಮುರಿ ಕಟ್ಟಿದರು.

ಅವರೊಂದಿಗಿದ್ದ ಒಬ್ಬ ಮುದುಕ. "ಎಂಥ ಕೆಟ್ಟ ಕಾಲ ಬಂತು! ನಾನು ಮನೆಗೆ ಬರುವುದಿಲ್ಲವೆಂದು ಕೊಂಡು ಈ ಕಳ್ಳ ಕೊರಮ ಮನೆಯೊಳಗೆ ಹೊಕ್ಕು ಬೇರೂರಿಬಿಡುವುದೇ? ಯಾವುದಕ್ಕೂ ಒಳ್ಳೆಯದು ನಗನಾಣ್ಯಗಳ ಗತಿ ಏನಾಗಿಯೋ ನೋಡುತ್ತೇನೆ" ಎಂದು ಒಳಗೆ ಹೋಗಿ ಪೆಟ್ಟಿಗೆಗಳನ್ನು ನೋಡಿ. ಎದೆ ಬಡೆದುಕೊಳ್ಳುತ್ತ, "ಎಲ್ಲಾ ಖಾಲಿ! ಏನೂ



ಇಲ್ಲ. ಈ ಕಳ್ಳ ಯಾರಹತ್ತಿರವೂ ಅವುಗಳನ್ನೆಲ್ಲ ಕೊಟ್ಟು ಕಳಿಸಿದ್ದಾನೆ. ಹೇಳು! ನಗ ನಾಣ್ಯಗಳೆಲ್ಲಾ ಎಲ್ಲಿವೆ? ಯಾರಹತ್ರ ಕೊಟ್ಟೆ? ಸತ್ಯ ಹೇಳದಿದ್ದರೆ, ಆದುದಾಗಲಿ, ಕೊಂದು ಹಾಕಿಬಿಡುತ್ತೇನೆ." ಎನ್ನುತ್ತ ವೆಂಕಟಾಚಲನ ಕೊರಳು ಹಿಡಿದನು.

"ನಾನು ಕಳ್ಳನಲ್ಲ; ನನಗೇನೂ ತಿಳಿಯದು. ನಾನು ಈಗತಾನೇ ಈ ಮನೆಗೆ ಬಂದವನು." ಎಂದು ವೆಂಕಟಾಚಲನು ನಡೆದ ಸಂಗತಿಯನ್ನೆಲ್ಲಾ ಹೇಳಿದನು.

"ಎಲ್ಲಾ ಸುಳ್ಳು! ನಿನ್ನ ಜತೆ ಕಳ್ಳ ಎಲ್ಲಿದ್ದಾನೆ ಹೇಳು!" ಎಂದು ವೆಂಕಟಾಚಲನ ಬೆನ್ನಮೇಲೆ ನಾಲ್ಕಾರು ಗುದ್ದುಗಳನ್ನು ಹಾಕಿದನು ಆ ಮುದುಕ.

ವೆಂಕಟಾಚಲನಿಗೆ ತೀರದ ಅವಮಾನವೆನಿಸಿತು. ಉದ್ಯೋಗಕ್ಕಾಗಿ, ಆಯ್ಕೆಯ ಪರೀಕ್ಷೆಯ ವೇಳೆ ಮೀರಿ ಹೋಗುತ್ತಿರುವ ಆತುರ ಒಂದುಕಡೆ ಹೊಸ ಊರು, ಹೊಸ ಮನುಷ್ಯರಿರುವಲ್ಲಿ ತನಗೆ ಯಾರು ಸಹಾಯಮಾಡುವರೆಂಬ ಆಂದೋಳನೆ ಇನ್ನೊಂದು ಕಡೆ! ಈ ಊರಿನಲ್ಲಿ ತನ್ನನ್ನು ಗುರುತಿಸುವವರು ಯಾರು? ತನ್ನನ್ನು ಮನೆಯೊಳಗೆ ಕಳುಹಿಸಿ ಹೊರಗೆ ಹೋದವನು ಕಳ್ಳನೇದಾಯಿತು. ನಗರದಲ್ಲಿ ಕಳ್ಳರು ಇಷ್ಟೊಂದು ದೊಡ್ಡ ರೀತಿಯಲ್ಲಿ ಇರುವ ರೆಂದಾಯಿತು!

ಅವನು ಎಲ್ಲರಿಗೂ ಕೈ ಮುಗಿಯುತ್ತ, "ಆ ಮನುಷ್ಯ ಇಂಥಾ ಕಳ್ಳನೆಂದು ನನಗೆ ತಿಳಿಯಲಿಲ್ಲ. ನಾನು ಇಲ್ಲಿಗೆ ಉದ್ಯೋಗಕ್ಕಾಗಿ ಬಂದವನು. ನನ್ನ ತಂದೆಯ ಮಿತ್ರರು ಅವರ ಮಿತ್ರರಿಗೆ ಕೊಟ್ಟ ಒಂದು ಪತ್ರವನ್ನೂ ತಂದಿದ್ದೆ. ಇದು ಮುರಹರಿ ಎಂಬವರ ಮನೆಯಲ್ಲವೇನು?" ಎಂದು ಕೇಳಿ, ಕಾಗದವನ್ನು ತೆಗೆದು ಅವರಿಗೆ ತೋರಿಸಿದನು.

ಮುರಹರಿ ಈ ಮನೆಯನ್ನು ಬಿಟ್ಟುಹೋಗಿ ಆರು ತಿಂಗಳಾಯಿತು. ಪ್ರಸ್ತುತಕ್ಕೆ ಇವನನ್ನು ಕೋಣೆ ಯೊಳಗೆ ಬಂಧಿಸಿಡಬೇಕು. ಒಬ್ಬರು ಹೋಗಿ ಆ ಮುರಹರಿಯನ್ನು ಇಲ್ಲಿಗೆ ಕರಕೊಂಡು ಬನ್ನಿ" ಎಂದನು ಹಿರಿಯನೊಬ್ಬ. ಅದರಂತೆ ಕೂಡಲೇ ವೆಂಕಟಾಚಲನನ್ನು ಕೋಣೆಯೊಳಗೆ ದೂಡಿ



ಬಾಗಿಲುಹಾಕಿ ಚಿಲಕಸಿಕ್ಕಿಸಿ, ಮುರಹರಿಯನ್ನು ಕರೆದು ತರಲು ಓಡಿದನೊಬ್ಬ. ಮುರಹರಿ ಬರುವಾಗ ಮಧ್ಯಾಹ್ನವಾಯಿತು.

ಆ ಹೊತ್ತಿಗೆ ವೆಂಕಟಾಚಲನು, ಬಳಲಿಕೆಯಿಂದಲೂ, ನಿದ್ದೆಯಿಲ್ಲದೆಯೂ, ಹಸಿವೆಯಿಂದಲೂ, ಉದ್ಯೋಗದ ಪರೀಕ್ಷೆ ಮಿಾರಿಹೋಯಿತೆಂಬ ಆಂದೋಳನೆಯಿಂದಲೂ ಅರ್ಧಸತ್ತವನ ಹಾಗಾಗಿದ್ದ.

ಮುರಹರಿ ಬಂದು ವೆಂಕಟಾಚಲನ ಕೈಯಲ್ಲಿದ್ದ ಕಾಗದವನ್ನು ಓದಿ, "ಇದು ನನ್ನ ಸ್ನೇಹಿತನು ಬರೆದ ಪತ್ರವೇ. ಈ ಹುಡುಗನನ್ನು ನಾನು ಈ ಮೊದಲು ನೋಡಿಲ್ಲವಾದರೂ, ಇವನಲ್ಲಿ ಯಾವ ಮೋಸವೂ ಇಲ್ಲ, ಇವನು ನಮ್ಮೂರಿನವನೇ, ಸಂಶಯವೇನಿಲ್ಲ" ಎಂದನು.

ಆ ಮೇಲೆ ಎಲ್ಲರೂ ವೆಂಕಟಾಚಲನನ್ನು ಹಿಂಸಿಸಿದ್ದಕ್ಕೆ ನೊಂದುಕೊಂಡು ಕ್ಷಮೆ ಕೇಳುತ್ತ ಅವನನ್ನು ಬಿಟ್ಟರು. ಮುರಹರಿ ಅವನನ್ನು ತನ್ನ ಮನೆಗೆ ಬರಲು ಆಹ್ವಾನಿಸಿದರೂ, ವೆಂಕಟಾಚಲನು ನಿರಾಕರಿಸುತ್ತ, "ನನಗೆ ನೀವು ಬಹಳ ಉಪಕಾರಮಾಡಿದಿರಿ. ಇನ್ನು ನಾನು ಸೀದಾ ನಮ್ಮೂರಿಗೆ ಹೋಗಿಬಿಡುತ್ತೇನೆ. ಇಲ್ಲಿ ಉದ್ಯೋಗದ ಪರೀಕ್ಷೆ ಆಗಲೇ ಮುಗಿದುಹೋಯಿತು" ಎಂದು ಹೇಳಿ ಆ ಮನೆಯಿಂದ ಹೊರಟನು.

ದಾರಿಯಲ್ಲಿ ಶೇಷಾದ್ರಿ ಅವನಿಗೆ ಇದಿರಾಗಿ ಬಂದು, "ಪರೀಕ್ಷೆಗೆ ನೀನೇಕೆ ಬರಲಿಲ್ಲ?" ಎಂದು ಕೇಳಿದನು.

ವೆಂಕಟಾಚಲನು ನಡೆದ ಸಂಗತಿಯನ್ನೆಲ್ಲಾ ಅವನೊಂದಿಗೆ ಹೇಳಿದನು. ಅದನ್ನೆಲ್ಲಾ ಕೇಳಿ ಶೇಷಾದ್ರಿ, "ಇದರಿಂದ ಒಂದು ವಿಷಯ ಗೊತ್ತಾಯಿತು ಬಿಡು. ನಿನಗೆ ನಗರದಲ್ಲಿ ಉದ್ಯೋಗ ಸರಿಬೀಳದು. ಏಕೆಂದರೆ ನಗರದಲ್ಲಿ ಮೋಸಮಾಯೆಗಳು ಸರ್ವಸಾಧಾರಣವಾಗಿರುತ್ತವೆ. ಅವುಗಳನ್ನು ಬುದ್ಧಿವಂತಿಕೆಯಿಂದ ಇದಿರಿಸಬೇಕು. ನೀನು ಏನು ಹೇಳಿದರೂ ಆ ಸ್ಥಿತಿಯಲ್ಲಿ ನಿನ್ನ ಮಾತು ಯಾರೂ ಕೇಳುವಂತಿಲ್ಲ. ಆಗ ನೀನು ಕಳ್ಳನನ್ನು ತೋರಿಸುತ್ತೇನೆಂದು ಹೇಳಿ ಅವರನ್ನೆಲ್ಲ ನಗರಪಾಲಕ ಸಂಸ್ಥೆಗೆ ಕರಕೊಂಡು ಬರಬೇಕಿತ್ತು. ಅಲ್ಲಿ ನಾನಿರುತ್ತೇನಲ್ಲ? ನಮ್ಮ ಅರ್ಜಿಗಳೂ ಅಲ್ಲಿರುತ್ತವೆ. ಅವುಗಳಿಂದ ನೀನು ಕಳ್ಳನಲ್ಲವೆಂದು ಸುಲಭವಾಗಿ ಗೊತ್ತಾಗುತ್ತಿತ್ತು, ಪರೀಕ್ಷೆಗೂ ಹಾಜರಾಗಿಬಿಡುತ್ತಿದ್ದಿ. ಹೋಗಲಿಬಿಡು. ನನ್ನನ್ನು ಎರಡು ದಿನಗಳಲ್ಲಿ ಬಂದು ಉದ್ಯೋಗದಲ್ಲಿ ಸೇರಲು ಅಪ್ಪಣೆಯಾಗಿದೆ." ಎಂದನು.

ವೆಂಕಟಾಚಲನಿಗೂ ನಗರದ ಮೋಜುಬಿಟ್ಟಿತು. ಗ್ರಾಮದಲ್ಲೇ ವ್ಯವಸಾಯಮಾಡುತ್ತ ನೆಮ್ಮದಿಯಾಗಿರತೊಡಗಿದನು.



# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ





ಬಹುಮಾನ ಗಳಿಸಿರಿ.

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
**P.B. No. 9928, COLABA, Bombay-400 005.**

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________________ Age ____________________

Address ____________________________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

**ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು : 31-3-1979**

Vision

**CONTEST NO 7**



# ಕರಡಿಕೆಂಗಣ್ಣ

೭

[ ಅರಣ್ಯದಲ್ಲಿ ಕಳ್ಳರ ನಾಯಕನಾದ ನಾಗಮಲ್ಲನಿಗೆ ಸಿಕ್ಕಿದ ದುರ್ಮುಖರಾಜನು ತನ್ನ ಹೆಸರು ದುರ್ಜಯಶೆಟ್ಟಿ ಎಂದು ಹೇಳಿ ತಪ್ಪಿಸಿಕೊಳ್ಳಲು ನೋಡಿದನು. ನಾಗಮಲ್ಲನು ನಂಬದೆ ಅವನನ್ನು ಒಂದು ಗುಹೆಯೊಳಗೆ ಒಯ್ದನು. ಕಟುಕನಾಯಕ ಕರಡಿ ರೂಪದಲ್ಲಿ ಅಲ್ಲಿಗೇ ಬಂದನು. ಅವರ ಶಬ್ದ ಕೇಳಿ ಉಗ್ರದಂಡನೆಂಬ ರಾಕ್ಷಸನೊಬ್ಬ ಅಲ್ಲಿ ಬಂದನು. ಕಟುಕಕರಡಿಯವನು ರಾಕ್ಷಸನ ಮೇಲೆ ಚಪಗೊಡಲಿ ಎತ್ತಿದನು.]

**ಸೂ**ರ್ಯಕಾಂತಿಯಲ್ಲಿ ಜಗಜಗ ಹೊಳೆಯುವ ಚಪ ಗೊಡಲಿಯನ್ನೂ, ಅದನ್ನು ತನ್ನ ಕಡೆಗೆ ಎತ್ತಿ ಹಿಡಿದು ಕುಣಿಸುತ್ತ ಮುಂದೆಬರುವ ಕರಡಿಕಟುಕ ನಾಯಕನನ್ನೂ ನೋಡಿ ಉಗ್ರದಂಡ ರಾಕ್ಷಸನಿಗೆ ಮೊದಲು ಆಶ್ಚರ್ಯವಾಯಿತು. ಅಷ್ಟರಲ್ಲಿ ಏನೋ ನೆನಪಿಗೆ ಬಂದು ಅವನಲ್ಲಿ ಕಂಪನ ಉಂಟಾಗ ತೊಡಗಿತು. ಆದರೂ ಅವನು ತನ್ನ ಕಲ್ಲಿನ ಗದೆಯನ್ನು ಮುಂದಕ್ಕೆ ಚಾಚಿ, "ಎಲೋ! ನೀನೊಬ್ಬ ಕಳ್ಳ! ನಿಜವಾದ ಭಲ್ಲೂಕವಲ್ಲ. ಮಾನವ ಭಲ್ಲೂಕಾಧಮಾ! ನಿಲ್ಲಲ್ಲೇ! ಏನು ನಿನ್ನ ಪೊಗರು?" ಎಂದು ಗರ್ಜನೆಯುದನಿಯಲ್ಲಿ ಕೇಳಿದನು. ಕರಡಿ ಕಟುಕನು ತಟ್ಟನೆ ನಿಂತು, ಉಗ್ರದಂಡನನ್ನು ಮೇಲಿಂದ ಕೆಳಗಿನವರೆಗೂ ನೋಡಿ, "ಎಲವೋ! ಉಗ್ರದಂಡರಾಕ್ಷಸಾ! ರಾಕ್ಷಸನೆಂಬ ಅಹಂಕಾರ ನನ್ನ ಮುಂದೆ ತೋರಿಸಬೇಡ! ನಿನ್ನ ಹೋತದ ಗಾಂಭೀರ್ಯವನ್ನು ಸಾಕುಮಾಡು: ನಿನ್ನ ಕಾಲೂ ಗದೆಹಿಡಿದ ಕೈಯೂ ಕಂಠಸ್ವರವೂ ನಡುಗುವುದು ನನಗೆ ಕಾಣುತ್ತದೆ! ಬರೀ ಭೂತಾಕಾರ ನೋಡಿ ಹೆದರುವ ಪಿಂಡವಲ್ಲ ನಾನು!" ಎಂದನು. ಆ ಮಾತು ಕೇಳಿ ಉಗ್ರದಂಡನು ಹಲ್ಲು ಕಡಿಯುತ್ತ,



ಕಾಲುಗಳಿಂದ ನೇಲವನ್ನು ಗುದ್ದಿ, "ಓಹ್ಹೋ! ನಿನ್ನ ಕಣ್ಣು ಸೂಕ್ಷ್ಮವಾಗಿದೆಯೆಂದಾಯಿತು. ನನ್ನ ಕೈಕಾಲುಗಳು ಏಕೆ ನಡುಗುತ್ತಿವೆ ಗೊತ್ತೋ? ನಿನ್ನನ್ನು ನೋಡಿದ ಭಯದಿಂದಲೇನಲ್ಲ. ಅಸಹ್ಯದಿಂದ! ಕೋಪದಿಂದ! ಹೌದೂ, ನಿನ್ನಲ್ಲಿ ಕರಡೀ ಪಾಲೆಷ್ಟು? ಮನುಷ್ಯನ ಪಾಲೆಷು? ನಿನ್ನ ವೇಷದ ಸಂಕರ ರಹಸ್ಯ ನನಗೆ ಗೊತ್ತಾಗದೆಂದುಕೊಂಡೆಯಾ? ಏನಿದು ಈ ವಿಚಿತ್ರ ಸಂಕರ ರೂಪ?" ಎಂದನು.

ಆ ಮಾತು ಕೇಳಿ ಕಟುಕಭಲ್ಲೂಕನು ಅತ್ಯುಗ್ರನಾಗಿ, ಚಪ ಗೊಡಲಿಯಿಂದ ಸಮೀಪದಲ್ಲಿದ್ದ ಬಂಡೆಯ ಮೇಲೆ ಹೊಡೆದು, "ಎಲವೋ ರಾಕ್ಷಸಾಧಮನೇ, ಕರಡೀಕೆಂಗಣ್ಣ ಮಾಂತ್ರಿಕರಿಂದ ಸೃಷ್ಟಿಸಲ್ಪಟ್ಟ ಈ ಕಟುಕರನಾಯಕ ಕರಡಿಯಾದ ನನ್ನನ್ನು ಅವಹೇಳನೆ ಮಾಡುವೆಯೇನು? ಇದು ಸಂಕರವೇಷವಲ್ಲ; ಬಂಡೆಯಂತೆ ಗಟ್ಟಿಯಾದ ಶರೀರ! ಇಗೋ, ನಿನ್ನ ತಲೆಯನ್ನು ಈಗಲೇ ನೆಲದಮೇಲೆ ಹೊರಳಾಡಿಸುತ್ತೇನೆ!" ಎಂದು ಮುಂದಕ್ಕೆ ಕುಪ್ಪಳಿಸಿ ಹಾರಿ, ಚಪಗೊಡಲಿಯನ್ನು ಸೊಯ್ಯನೆ ತಿರುಗಿಸಿ ರಾಕ್ಷಸನ ಕಂಠದ ಕಡೆಗೆ ಬೀಸಿದನು.

ಉಗ್ರದಂಡನು ಹಿಂದಕ್ಕೆ ಕುಪ್ಪಳಿಸಿ, ಅಲ್ಲಿದ್ದ ಚಿಕ್ಕದೊಂದು ದೇವದಾರು ವೃಕ್ಷದ ಬಳಿಯಲ್ಲಿ ಸರಿದು ನಿಂತು, ಮತ್ತೆ ತನ್ನ ಕಡೆಗೆ ಚಪಗೊಡಲಿ ತಿರುಗಿಸುತ್ತಾ ಬರುವ ಕಟುಕಕರಡಿಯುವನೊಂದಿಗೆ; "ಎಲೋ ಕರಡಿಯಾದ ಕಟುಕಮನುಷ್ಯಾ, ನೀನೂ ನನ್ನ ಹಾಗೇ ಮಹಾ ಬಲಿಷ್ಠನೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಸ್ವಲ್ಪ ಶಾಂತಿ ವಹಿಸಿ ಆಲೋಚನೆ ಮಾಡು. ನಾವಿಬ್ಬರೂ ಜಿದ್ದಿಗೆಬಿದ್ದು ಒಬ್ಬರನ್ನೊಬ್ಬರು ಕೊಂದುಕೊಳ್ಳುವ ಹೆಣಗಾಟದಲ್ಲಿ ಕೈಕಾಲು ಮುರಿದುಕೊಂಡರೆ ಯಾರಿಗೆ ಲಾಭವಾಗುತ್ತೆ ಗೊತ್ತೇನೋ?" ಎಂದನು.

ಆ ಪ್ರಶ್ನೆ ಕೇಳಿದ ಕೂಡಲೇ ಕರಡಿಕಟುಕ ನಾಯಕನಿಗೆ ತಾನು ಆ ಪ್ರಾಂತಕ್ಕೆ ಬಂದ ಕೆಲಸವೇನೆಂಬುದು ನೆನಪಿಗೆ ಬಂತು. ಕರಡಿಕೆಂಗಣ್ಣ ಮಾಂತ್ರಿಕರು ತನ್ನನ್ನು ಕಳುಹಿಸಿದ್ದು, ದುಷ್ಟನಾದ ಉದಯಗಿರಿಯ ದುರ್ಮುಖರಾಜನ ತಲೆಯನ್ನು ಕಡಿಯಬೇಕೆಂದು. ಆ ಕೆಲಸ ಮುಗಿಸಿಕೊಂಡು ಹಿಂದಿರುಗಿ ಹೋಗುವುದನ್ನು ಬಿಟ್ಟು ರಾಕ್ಷಸನೊಂದಿಗೆ ತಕರಾರು ಮಾಡಬೇಕಾದ ಅಗತ್ಯವೇನಿದೆ? ತನ್ನನ್ನು ಹೆದರಿಸಿದ ಆ ರಾಕ್ಷಸ ತಾನು ಬೀಸಿದ ಚಪಗೊಡಲಿಯನ್ನು ನೋಡಿ ಅಷ್ಟು ದೂರ ಓಡಿದನೆಂದರೆ ಅವನು ಸೋತು ಓಡಿದಂತೆಯೇ! ತಾನು ಗೆದ್ದಂತೆಯೇ! ಇದಿಷ್ಟಕ್ಕೂ ಮೂಲಕಾರಣ ಮಹಾಮಾಂತ್ರಿಕರಾದ ಕರಡಿಕೆಂಗಣ್ಣರೇ! ಅವರು ಹೇಳಿದ ಕಾರ್ಯವೇ ಮುಖ್ಯವಲ್ಲದೆ, ಈ ರಾಕ್ಷಸನೊಂದಿಗೆ ಸ್ಪರ್ಧೆ ತನಗೇಕೆ?

ಹೀಗೆ ಆಲೋಚನೆಮಾಡಿ, ಬೆರಳಿನಿಂದ ಚಪಗೊಡಲಿಯ ಹರಿತವೆಷ್ಟೆಂಬುದನ್ನು ನೋಡುತ್ತ

"ಎಲೋ ಉಗ್ರದಂಡಾ! ನಾನಿಲ್ಲಿಗೆ ಬಂದ ಕಾರ್ಯ ವೇನೆಂಬುದನ್ನು ಸರಿಯಾದ ಸಮಯಕ್ಕೆ ನೆನಪು ಮಾಡಿದಿ. ಮೆಚ್ಚಿದೇ ನಿನಗೆ! ಇನ್ನು ನಿನ್ನ ದಾರಿ ಹಿಡಿದು ಹೋಗಿಬಿಡು. ನಾನು ಅಲ್ಲಿ ಗುಹೆಯೊಳಗೆ ಅಡಗಿರುವ ಆ ದುರ್ಮುಖರಾಜನ ತಲೆ ಕಡಿದು ಕೊಂಡು ನನ್ನ ದಾರಿಹಿಡಿದು ಹೋಗುತ್ತೇನೆ. ನನಗಾಗಿ ಮಹಾ ಮಾಂತ್ರಿಕರು ಕಾದಿದ್ದಾರೆ." ಎಂದು ಹೇಳಿ ಹಿಂದಕ್ಕೆ ತಿರುಗಿದನು.



ಉಗ್ರದಂಡನು ಎರಡಡಿ ಮುಂದಕ್ಕಿಟ್ಟು, "ಸ್ವಲ್ಪ ತಾಳು ಕಟಕನಾಯಕನೇ! ಇದೀಗ ನೀನು ಕರಡಿ ಕೆಂಗಣ್ಣ ಎಂಬ ಮಹಾಮಾಂತ್ರಿಕರ ಹೆಸರು ಹೇಳಿದೆ ಯಲ್ಲ? ನಾನೂ ಒಬ್ಬ ಕೆಂಗಣ್ಣ ಮಾಂತ್ರಿಕನನ್ನು ನೋಡಿದ್ದೇನೆ. ಆತನೂ ನೀನು ಹೇಳುವವನೂ ಒಬ್ಬನೆಯೋ ಬೇರೆ ಬೇರೆಯೋ ಅಂತ ಸಂದೇಹ ವಾಗಿದೆ. ನೀನು ಹೇಳುವ ಈ ಮಾಂತ್ರಿಕನ ವಯಸ್ಸು ಎಷ್ಟಿರಬಹುದು? ರೂಪ ಆಕಾರ ಆಯುಧ ಮುಂತಾದ್ದು ಹೇಗಿವೆ?" ಎಂದನು.

ಕರಡಿಕಟುಕನಾಯಕನು, ದೊಡ್ಡ ಧ್ವನಿಯಿಂದ ನಕ್ಕು, "ಸೂರ್ಯ ಚಂದ್ರರ ವಯಸ್ಸೆಷ್ಟೋ ಅವರಿಗೂ ಅಷ್ಟೇ ವಯಸ್ಸು. ಅವರ ಕಣ್ಣು ಮುಂದೆಯೇ ಹಿಮಾಲಯ ಪರ್ವತಗಳು ಹುಟ್ಟಿ ಇಷ್ಟು ದೊಡ್ಡದಾಗಿವೆ. ಬ್ರಹ್ಮಪುತ್ರಾ ನದಿ ಎಳೆ ಮಗುವಾಗಿದ್ದಾಗ ಕಿವ್ವನೆ ಅರಚಿ ಸಾವಿರಾರು ಜಲ ಶಾಖೆಗಳಾಗಿ ಓಡಾಡುತ್ತಾ ಹಾರಿದುದನ್ನು ಆತ ನೋಡಿದ್ದಾನೆ. ಉಳಿದದ್ದೆಲ್ಲಾ ವಿವರಸಿ ಹೇಳಲಿಕ್ಕೆ ಈಗ ಸಮಯವಿಲ್ಲ, ಹೋಗಯ್ಯ" ಎಂದನು.

"ಭಳಿರೇ, ಕರಡಿಕಟುಕಾ! ನಿನ್ನ ಕೈಯಲ್ಲಿರುವ ಚಪಗೊಡಲಿ ಎಷ್ಟು ಹರಿತವೋ, ನಿನ್ನ ತಲೆ ಯೊಳಗಿನ ನಾಲಗೆಯೂ ಅಷ್ಟೇ ಹರಿತ! ನಾನೂ ನಿನ್ನ ಹಿಂದೆಯೇ ಬಂದು ಆ ಕರಡಿಕೆಂಗಣ್ಣ ಮಹಾ ಮಹಾಮಾಂತ್ರಿಕರ ದರ್ಶನ ಮಾಡಿದರೆ ಏನೂ ಅಂತ? ಬರಲೇ? ಯಾಕೆಂದರೆ ಅವರೊಂದಿಗೆ ಸ್ನೇಹ ಮಾಡಲಿಕ್ಕೆ ಸಾಧ್ಯವೋ ನೋಡಬೇಕು." ಎಂದು ಉಗ್ರ ದಂಡ ರಾಕ್ಷಸನು ತನ್ನ ಕೈಯಲ್ಲಿದ್ದ ಕಲ್ಲಿನ ಗದೆಯನ್ನು ದೂರ ಬಿಸುಟನು.

ರಾಕ್ಷಸನ ಈ ದಿಢೀರ್ ಕೆಲಸವನ್ನು ನೋಡಿ, ಕರಡಿಕಟುಕನು ಆಶ್ಚರ್ಯ ಪಡುತ್ತ, "ಇದೇ ನಿದೇನು? ನಿನ್ನ ಕಲ್ಲಿನ ಗದೆಯನ್ನು ಅಷ್ಟು ದೂರ ಬಿಸುಟುಬಿಟ್ಟೆಯಲ್ಲ! ಇದರಲ್ಲೇನಾದರೂ ವಿಶೇಷ ವಿದೆಯೆ?" ಎಂದನು.

"ಯಾಕಿಲ್ಲ? ಈ ಕ್ಷಣದಿಂದ ನಾವಿಬ್ಬರೂ. ಅಂದರೆ ನೀನೂ ನಾನೂ ಸ್ನೇಹಿತರು!" ಎಂದನು ಉಗ್ರದಂಡ ನಗುತ್ತ.

ಆದನ್ನು ಕೇಳಿ ಕರಡಿಕಟುಕನು ಹೊಟ್ಟೆ ಹುಣ್ಣಾ ಗುವ ಹಾಗೆ ನಕ್ಕು, "ಕೆಂಗಣ್ಣ ಮಾಂತ್ರಿಕರ ಕೈಯಲ್ಲಿರುವ ಭಲ್ಲೂಕ ಶಿರಸ್ಸಿನ ಮಂತ್ರದಂಡವು ತಗಲಿ ನನ್ನ ರೂಪ ಹೀಗಾದರೂ, ಆಸಲು ನಾನು



ಯಾರೆಂಬುದು ಸ್ವಲ್ಪ ಮಟ್ಟಿಗೆ ನೆನಪಿದೆ. ದುರ್ಮುಖ ರಾಜನ ತಲೆಯನ್ನು ಅವರಿಗೆ ಕೊಟ್ಟ ಮರುಕ್ಷಣದಲ್ಲೇ ಅವರು ನನ್ನನ್ನು ಕಟುಕ ಮಾನವನನ್ನಾಗಿ ಮಾಡಿ ಬಿಡುತ್ತಾರೆ. ಆದುಪರಿಂದ ನಮ್ಮಿಬ್ಬರ ನಡುವೆ ಸ್ನೇಹವು ಸಾಗಲಾರದು. ನಾನು ನಿನಗೆ ತಕ್ಕ ಸ್ನೇಹಿತ ನಾಗಲು ಸಾಧ್ಯವೇ ಇಲ್ಲ, ಇದ್ದರೂ ನನಗೆ ಬೇಡ. ನಿನ್ನ ಗುಹೆಯ ದಾರಿ ನೀನು ನೋಡಿಕೋ ರಾಕ್ಷಸಾ!" ಎಂದು ಹೇಳಿ, ದುರ್ಮುಖನು ಸೇರಿಕೊಂಡಿರುವ ಗುಹೆಯ ಕಡೆಗೆ ನಡೆದನು.

ಈ ಸಾರಿ ಕರಡಿ ಕಟುಕನಾಯಕನು ಗುಹೆಯ ಬಾಯಿಯಲ್ಲಿರುವ ಕಲ್ಲನ್ನು ಎಳೆದು ಹೊರಳಿಸುವ ಪ್ರಯತ್ನ ಮಾಡಿದ ಕೂಡಲೇ ಒಳಗಿದ್ದ ರಾಜನ ಅಂಗರಕ್ಷಕನು ಕಳ್ಳ ನಾಗಮಲ್ಲನೊಂದಿಗೆ, "ಈ ಕಲ್ಲು ಎಷ್ಟು ಹೊತ್ತು, ಹೀಗೆ ನಿಂತೀತು? ಅವನ ಶಕ್ತಿ ಯಿಂದ ಈಸಾರಿ ಖಂಡಿತಾ ಗುಹೆಯ ಕಲ್ಲು ಹೊರಳಿ ಹೋಗುತ್ತದೆ. ಆಮೇಲೆ ಮಹಾರಾಜರೊಂದಿಗೆ ನಾವೆಲ್ಲರೂ ಸಾಯಬೇಕು! ಈಗೇನು ಮಾಡೋಣ?" ಎಂದನು ಒಣ ತರಗೆಲೆಯಂತೆ ನಡುಗುತ್ತ.

ನಾಗಮಲ್ಲನು ದುರ್ಮುಖರಾಜನನ್ನು ನೋಡಿ ದನು. ದುರ್ಮುಖನು ತನಗೆ ತಾನೇ ಗೊಣಗಿ ಕೊಳ್ಳುತ್ತ ಅಲುಗಾಡುವ ಗುಹೆಯ ದ್ವಾರದ ಕಲ್ಲನ್ನೇ ನೋಡುತ್ತಿದ್ದನು.

ನಾಗಮಲ್ಲನು ತನ್ನ ಇಬ್ಬರು ಅನುಚರರಿಗೆ ಕತ್ತಿಗಳನ್ನು ಸಿದ್ಧವಾಗಿಟ್ಟುಕೊಳ್ಳಲು ಎಚ್ಚರಿಸಿ, ದುರ್ಮುಖನೊಂದಿಗೆ, "ಎಲೈ ದೊಡ್ಡ ಮನುಷ್ಯನೇ, ನಿನ್ನ ಅಂಗರಕ್ಷಕನ ಮಾತಿನಿಂದ ನೀನು ಬರಿಯ ಶೆಟ್ಟಿಗಿಟ್ಟಿ ಅಲ್ಲವೆಂದು, ರಾಜನೇ ಎಂದು ನಮಗೆ ನಂಬುಗೆಯಾಗಿದೆ. ನೀನೀಗ ನಿನ್ನ ತಲೆಯನ್ನು ಉಳಿಸಿ ಕೊಳ್ಳುವ ಪ್ರಯತ್ನ ಮಾಡುವುದನ್ನು ಬಿಟ್ಟು, ಗೊಣಗುತ್ತಿರುವುದು ಏನನ್ನು? ಮಂತ್ರಗಿಂತ್ರ ಹೇಳುವೆಯಾ?" ಎಂದನು ಕೋಪದಿಂದ.

"ನಾನು ಗೊಣಗುವುದು ಮಂತ್ರ. ಇಷ್ಟ ದೈವದ ಮಂತ್ರ! ಏನು ಮಾಡಬೇಕೆಂದು ದೈವವನ್ನು ಪ್ರಾರ್ಥಿಸುತ್ತಿದ್ದೇನೆ!" ಎಂದನು ದುರ್ಮುಖರಾಜ ನಡುಗುವ ಕಂಠದಿಂದ.

"ಓಹೋ! ಹಾಗಾದರೆ ಈ ದಿನದವರೆಗೆ ನೀನು ಮಾಡಿದ ಕೆಲಸಗಳನ್ನೆಲ್ಲಾ ನಿನ್ನ ಇಷ್ಟದೈವದ ಅನು ಮತಿಯಿಂದಲೇ ಮಾಡಿರುವೆಯೆಂದಾಯಿತು. ಎಲ್ಲರೂ ನಿನ್ನ ಆಳಿಕೆಯ ಅನ್ಯಾಯವನ್ನು ಹೇಳುವುದು ಕೇಳಿದ್ದೇನೆ. ಛೀ ಛೀ! ಹೊರಗೆ ನಡಿ! ಅಧಮ ರಾಜ!" ಎಂದು ನಾಗಮಲ್ಲನು ತಿರಸ್ಕಾರದಿಂದ ದುರ್ಮುಖನನ್ನು ದೂಡಿ, ಅರ್ಧ ತೆರೆದ ಗುಹೆಯ ಬಾಗಿಲ ಬಳಿಗೆ ಹೋಗಿ, "ಓಯ್ ಭಲ್ಲೂಕ ಮಹಾನುಭಾವಾ! ಸ್ವಲ್ಪ ನಿಧಾನಿಸು. ಈ ಗುಹೆ ಯೊಳಗಿರುವವರಲ್ಲಿ ನಿನಗೆ ಬೇಕಾದವರು ದುರ್ಮುಖ ಶೆಟ್ಟಿ ಎಂದು ಸುಳ್ಳು ಹೇಳುವ ದುರ್ಮುಖರಾಜ ತಾನೇ? ಅಥವಾ ಇಲ್ಲಿ ಇರುವವರೆಲ್ಲರೂ ನಿನಗೆ

ಆಹುತಿಯಾಗಬೇಕೆ ? " ಎಂದು ಕೇಳಿದನು. "ಬೇಡ ಬೇಡ! ನನಗೆ ಬೇಕಾದವನು ದುರ್ಮುಖ ರಾಜ ನೊಬ್ಬನೇ! ಉಳಿದ ಚಿಲ್ಲರೆ ಮನುಷ್ಯರೊಂದಿಗೆ ನನಗೇನು ಕೆಲಸ ? ಅವನನ್ನು ಗುಹೆಯೊಳಗಿನಿಂದ, ತಲೆಸಹಿತ ಹೊರಗೆದೂಡಿರಿ. ತಲೆ ಮಾತ್ರ ಕಡಿದು ಕೊಂಡು ಹೋಗಿಬಿಡುತ್ತೇನೆ. ದೇಹವನ್ನು ನೀವೇ ಇಟ್ಟುಕೊಳ್ಳಿ!" ಎಂದನು ಕರಡಿಕಟುಕ.

"ಹಾಗಾದರೆ ಸ್ವಲ್ಪ ತಾಳು" ಎಂದು ಕಳ್ಳರ ನಾಯಕನು ಹಿಂದಕ್ಕೆ ತಿರುಗಿ ದುರ್ಮುಖನನ್ನು ನೋಡಿ, "ರಾಜಾ ದುರ್ಮುಖಾ! ಇನ್ನೂ ನಾನಲ್ಲ ವೆನ್ನಬೇಡ. ಹೊರಗಿನವನು ಹೇಳಿದ ಮಾತು ನೀನೂ ಕೇಳಿದಿಯಲ್ಲವೇ? ಸಾವಂತೂ ನಿನಗೆ ತಪ್ಪುವುದಿಲ್ಲ. ರಾಜೋಚಿತವಾಗಿ ವೀರನಂತೆ ಕತ್ತಿ ಹಿರಿದು ಆ ಕರಡಿ ಮನುಷ್ಯನೊಂದಿಗೆ ಹೋರಾಡಿ ಸಾಯಬಾರದೆ ? ತೆಗೆ ಕತ್ತಿ! ನಿನ್ನಂಥ ರಾಜ ಬಲಿ ಆಡಿನಂತೆ ತಲೆ ಕಡಿಸಿಕೊಂಡರೆ, ನಿನ್ನ ಪ್ರಜೆಗಳೇ ನಕ್ಕಾರು, ನಾಚಿಕೆ ಯಲ್ಲವೆ!" ಎಂದನು.

ದುರ್ಮುಖನು ಗೊಗ್ಗರು ಕೊರಳಿನಿಂದ, "ನಾನು ರಾಜೋಚಿತವಾಗಿ ಬದುಕಲು ಕಲಿತವನು. ರಾಜೋ ಚಿತವಾಗಿ ಸಾಯಲು ಕಲಿಯಲಿಲ್ಲವಯ್ಯಾ! ಈಗ ಥಕ್ಕನೆ ಹೇಗೆ ಕಲಿಯಲಿ?" ಎಂದು ಹೇಳಿ, ತನ್ನ ಅಂಗರಕ್ಷಕನನ್ನು ನೋಡಿ, "ಎಲೋ, ಅಂಗರಕ್ಷಕಾ! ನಿನ್ನ ಸ್ವಾಮಿಭಕ್ತಿ ಎಷ್ಟೆಂದು ತೋರಿಸಿ ಸ್ವರ್ಗಕ್ಕೆ ಹೋಗಲು ಇದೇ ನಿನಗೆ ಒಳ್ಳೆಯ ಅವಕಾಶ! ನೀನು ಮುಂದೆ ಇದ್ದು ಆ ಕಟುಕಕರಡಿಯವನನ್ನು ಇದಿರಿಸು. ಆ ಸಮಯದಲ್ಲಿ ನಾನು ತಪ್ಪಿಸಿ ಕೊಳ್ಳಲು ಎಡೆಸಿಗುವುದೋ ನೋಡುತ್ತೇನೆ. ನಿನ್ನ ಅಂಗರಕ್ಷಕನೆಂಬ ಕೀರ್ತಿ ಸೂರ್ಯಚಂದ್ರರಿರುವ ವರೆಗೂ ಉಳಿಯುವಂತೆ ಮಾಡುತ್ತೇನೆ! ಬಾ ಮುಂದೆ, ಬಾ ಬಾ" ಎಂದನು. ಆದರೆ ಅಂಗ ರಕ್ಷಕನು ಒರೆಯಿಂದ ತೆಗೆದ ಕತ್ತಿಯನ್ನು ಮತ್ತೆ



ಒರೆಯೊಳಗೆ ಸೇರಿಸಿ, "ನಾನು ಸತ್ತು ಸ್ವರ್ಗಕ್ಕೆ ಹೋಗಿಬಿಟ್ಟರೆ ನನ್ನ ಹೆಂಡತಿ ಮಕ್ಕಳ ಸುಖದುಃಖ ನನಗೆ ಹೇಗೆ ಗೊತ್ತಾಗುತ್ತದೆ? ಇನ್ನೂ ಸ್ವಲ್ಪ ಕಾಲ ಹೋದ ಮೇಲೆ ಸ್ವರ್ಗಕ್ಕೆ ಹೋದರೆ ಸಾಕು. ಪಾಪ, ಅವಳು ನಾನಿಲ್ಲದೆ ಬದುಕಲಾರೆ ಅನ್ನು ತ್ತಾಳೆ! ಅಲ್ಲದೆ ನನ್ನ ವೀರಪ್ರತಾಪ ತೋರಿಸ ಲಿಕ್ಕೂ ಸರಿಯಾದ ಜತೆ ಬೇಡವೇ? ಈ ನರ ಮೃಗದೊಂದಿಗೋ ನನ್ನ ಪರಾಕ್ರಮ ?" ಎನ್ನುತ್ತಾ ಗೋಡೆಗೆ ಒರಗಿ, ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿ ಕೊಂಡನು.

ಅಷ್ಟರೊಳಗೆ ಕರಡಿಕಟುಕನು ಭಯಂಕರವಾಗಿ ಹಲ್ಲು ಕಡಿದು, "ಎಲೋ! ಎಲ್ಲಿ ಆ ದುರ್ಮುಖ ರಾಜ? ಎಷ್ಟು ಹೊತ್ತು ನನ್ನನ್ನು ಕಾಯಿಸುವಿರಿ? ಸಾಕು ನಿಮ್ಮ ಕತೆ! ನಾನೀಗ ಗುಹೆಯೊಳಗೆ ಹೊಕ್ಕೆ ನೆಂದರೆ ಎಲ್ಲರನ್ನೂ ಕೊಯ್ದು ಹಾಕಿಬಿಡುತ್ತೇನೆ!" ಎಂದು ಗರ್ಜಿಸಿದ.



ಕಳ್ಳ ನಾಗಮಲ್ಲನು ತನ್ನ ಅನುಚರರಿಗೆ ಸನ್ನೆ ಮಾಡಿ, ಅವರನ್ನು ತನ್ನ ಬೆನ್ನಹಿಂದೆಯೇ ಇರಲು ಹೇಳಿ, ಕಲ್ಲನ್ನು ಪಕ್ಕಕ್ಕೆದೂಡಿ, ತಲೆಯನ್ನು ಹೊರಗೆ ಹಾಕಿ, "ಅಯ್ಯಾ, ನನ್ನನ್ನೂ ನನ್ನ ಇಬ್ಬರು ಸೇವಕರನೂ ಜೀವದೊಂದಿಗೆ ಹೋಗಲು ಬಿಡು. ನಾವು ಈ ಪ್ರಾಂತದಲ್ಲಿ ಅರಣ್ಯಮೃಗಗಳ ನಡುವೆ ದಿನಗಂಡ ಕ್ಷಣಗಂಡದಲ್ಲಿ ಬದುಕಿರುವವರು. ನಮಗೂ ನಿಮಗೂ ಯಾವ ವೈರವೂ ಇಲ್ಲ." ಎಂದನು.

"ಹೌದೌದು. ನೀವು ಕಳ್ಳರು. ಅದು ನನಗ್ಗೊತ್ತು. ಆದರೂ ನಿಮ್ಮ ಮೇಲೆ ನನ್ನದೇನೂ ಕೆಲಸವಿಲ್ಲ. ಕೋಪವೂ ಇಲ್ಲ. ನಂಬಿ, ನಿಮ್ಮ ದಾರಿ ಹಿಡಿದು ನೀವು ಹೋಗಿ. ನಾನೇನೂ ಮಾಡಲಾರೆ" ಎಂದ ಕರಡಿಕಟುಕ ನಾಯಕ.

ನಾಗಮಲ್ಲನೂ ಅವನ ಅನುಚರರೂ ಕಲ್ಲನ್ನು ಪೂರಾ ತೆಗೆದು ಹೊರಗೆ ಬಂದರು. ಆಗಲೇ ಅವರ ಎಡೆಯಲ್ಲಿ ದುರ್ಮುಖರಾಜನೂ ತೂರಿ ಅವರಿಗಿಂತ ಮುಂದೆ ಹೊರಗೆ ಧುಮುಕಿ, ವೇಗವಾಗಿ ಓಡಲು ತೊಡಗಿದನು. ಎಷ್ಟು ವೇಗವೆಂದರೆ ಕಲ್ಲು ಮುಳ್ಳು ಹಳ್ಳ ಪೊದೆ ಯಾವುದರ ಲಕ್ಷ್ಯವೂ ಅವನಿಗಿರಲಿಲ್ಲ.

ಕರಡಿಕಟುಕ ನಾಯಕ ಹಾರಿ ಕುಪ್ಪಳಿಸಿ, "ಓ! ಓ! ದುರ್ಮುಖಾ! ನಿಲ್ಲು ನಿಲ್ಲು!" ಎಂದು ಕೂಗುತ್ತಾ ಅವನ ಹಿಂದೆಯೇ ಓಡಿದನು. ದುರ್ಮುಖನು ಒಂದು ದೊಡ್ಡದಾದ ಮರದ ಮರೆಗೆ ಓಡಲು ನೋಡಿ, ಇದಿರಿನಲ್ಲಿ ಕಲ್ಲಿನ ಗದೆಯನ್ನು ಹಿಡಿದು ನಿಂತಿದ್ದ ರಾಕ್ಷಸ ಉಗ್ರದಂಡನನ್ನು ನೋಡಿ, ತಾನು ಯಮನ ಮುಂದೆಯೇ ಬಂದೆನೆಂದುಕೊಂಡು ಸಾಯುವ ಹಾಗೆ ಕೂಗಿ ಅವನ ಮುಂದೆ ಮಗುಚಿಬಿದ್ದನು.

"ಸಿಕ್ಕಿದೆಯಾ! ಕಳ್ಳರಾಜಾ!" ಎನ್ನುತ್ತಾ ಕರಡಿಕಟುಕನು ದುರ್ಮುಖನನ್ನು ಸಮೀಪಿಸುತ್ತಿರಲು, ರಾಕ್ಷಸನು ಗದೆಯನ್ನು ಕೆಳಗೆ ಜಾರಿಸಿ ಕೈಯನ್ನೆತ್ತಿ, "ಸೋದರಾ! ಕರಡಿಕಟುಕ ನಾಯಕಾ! ಒಂದು ಕ್ಷಣ ನಿಲ್ಲು. ಇನ್ನು ಇವನ ತಲೆ ಕಡಿಯುವುದೇನೂ ಕಷ್ಟವಿಲ್ಲ. ಆದರೆ ಆ ಕರಡಿಕೆಂಗಣ್ಣ ಮಾಂತ್ರಿಕನು ನಿನ್ನ ಹತ್ತಿರ ಬದುಕಿರುವ ದುರ್ಮುಖರಾಜನ ತಲೆ ಕಡಿದು ತಾ ಅಂದನೇ ಅಲ್ಲ, ಸತ್ತ ದುರ್ಮುಖನ ತಲೆಯನ್ನು ತರಲು ಹೇಳಿದನೆ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಕರಡಿಕಟುಕನಿಗೆ ಆಶ್ಚರ್ಯವಾಯಿತು. ಅಚೇತನನಾಗಿ ಬಿದ್ದಿದ್ದ ದುರ್ಮುಖನ ಕಡೆಗೆ ಪರೀಕ್ಷೆಯಿಂದ ನೋಡಿ, "ಉಗ್ರದಂಡಾ, ಈ ದುರ್ಮುಖನು ಸತ್ತುಹೋದ ಹಾಗೆ ನಿನಗೆ ಕಾಣುತ್ತದೆಯೋ? ಸ್ವಲ್ಪವೂ ಚಲನೆಯೇ ಇಲ್ಲವಲ್ಲಾ!" ಎಂದು ಕೇಳಿದನು.

"ಸಾಯಲಿಲ್ಲ. ಈ ನರಮನುಷ್ಯ ನನ್ನನ್ನು ನೋಡಿ ಹೆದರಿ ಮೂರ್ಛೆ ಹೋಗಿದ್ದಾನೆ, ಮೂರ್ಛೆಯಲ್ಲಿರುವವನ ತಲೆ ಕಡಿಯುವುದು ಮಹಾ ಪಾಪ ಅಂತ ಹೇಳುತ್ತಾರೆ. ನನ್ನಂಥ ರಾಕ್ಷಸರೂ ಹಾಗೆ ಮಾಡುವುದಿಲ್ಲ. ಆದುದರಿಂದ ಈಗ ಒಂದು ಕೆಲಸ

ಮಾಡು. ಇವನನ್ನು ಆ ಮಾಂತ್ರಿಕನ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿಯೇ ತಲೆಕಡಿ. ಅಲ್ಲಿಗೆ ಹೋಗುವುದರೊಳಗೆ ಇವನಿಗೆ ಎಚ್ಚರಬಾರದೆ ಹೋಗದು. ಆಗ ಓಡಲು ನೋಡಿಯಾನು. ಜಾಗ್ರತೆ!" ಎಂದನು ಉಗ್ರದಂಡ.

ಕರಡಿಕಟುಕನು ಭುಸುಗುಡುವ ಹಾಗೆ, ಒಂದು ನಿಟ್ಟುಸಿರುಬಿಟ್ಟು, "ಎಂಥ ಹಾಳು ಕೆಲಸ! ಶತ್ರುವನ್ನು ಹೆಗಲ ಮೇಲೆ ಹೊರಲು ಹೇಳುವಿಯಾ? ಛೀ ಛೀ!" ಎಂದನು.

ಉಗ್ರದಂಡನು ಗುಹೆಯಕಡೆ ಒಂದುಸಾರಿ ನೋಡಿದನು. ಅಲ್ಲಿ ನಾಗಮಲ್ಲನು ತನ್ನ ಇಬ್ಬರು ಅನುಚರರೊಂದಿಗೆ ನಿಂತುಕೊಂಡು, ಓಡಿಹೋಗುವ ಎತ್ತುಗಡೆಯಲ್ಲಿ ತನ್ನವರೊಂದಿಗೆ ಗುಸಗುಸನೆ ಏನೋ ಮಾತಾಡುತ್ತಿದ್ದನು.



ಉಗ್ರದಂಡನು ಕಲ್ಲಿನ ಗದೆಯನ್ನು ಕೈಯಲ್ಲಿ ಹಿಡಿದೆತ್ತಿ ಗಿರಿಗಿರಿ ಬೀಸುತ್ತ" ಎಲೋ ದಾರೀ ದೋಚುವ ಭಂಡು ಮಕ್ಕಳೇ! ಓಡಿಗೀಡಿ ಹೋದೀರಾ? ಜಾಗ್ರತೆ! ಕಾಲಿನಿಂದ ಒರೆಸಿಬಿಟ್ಟೇನು! ಬನ್ನಿ ಹೀಗೆ. ಆ ಅಂಗರಕ್ಷಕ ಎಲ್ಲಿದ್ದಾನೆ? ಅವನನ್ನೂ ಇತ್ತ ಕರೆಯಿರಿ" ಎಂದು ಘೋರ ಕಂಠದಿಂದ ಗದರಿಸಿ ಹೇಳಿದನು.

ಮೂವರು ಕಳ್ಳರೂ ನಡುಗುತ್ತಲಿದ್ದರು. ನಾಗಮಲ್ಲನು ಗುಹೆಯೊಳಗೆ ಬಗ್ಗಿ ತೆವಳಿ ಹೋಗಿ ನೋಡಲು, ಅಂಗರಕ್ಷಕನು ಇನ್ನೂ ಹಾಗೇ ಒರಗಿ ಕುಳಿತಿರುವುದು ಕಂಡಿತು. "
ರಕ್ಷಕನೂ ಮೂರ್ಛೆ ಹೋಗಿ
ಕೂತಲ್ಲೇ ಜೀವ ಬಿಟ್ಟಿದ್ದಾನೆ!"
ಅಲುಗಾಡಿಸುತ್ತ. ಅಂಗರಕ್ಷಕ
ಅಂಗಾತ ಬಿದ್ದನು.

"ಅದೆಲ್ಲಾ ಸುಳ್ಳು. ಕಳ್ಳ
ಉಗ್ರದಂಡನು ಅಭಯವಿತ್ತು ಕ

ಹೇಳಿರಿ," ಎಂದ ಉಗ್ರದಂಡ. ಕಳ್ಳ ನಾಗಮಲ್ಲನು ಮತ್ತೆ ಗುಹೆಯೊಳಗೆ ಹೊಕ್ಕು "ಏ ಅಂಗರಕ್ಷಕಾ! ಎದ್ದೇಳು! ಎದ್ದೇಳು! ಮಹಾರಾಕ್ಷಸ ಉಗ್ರದಂಡ ಮಹಾನುಭಾವರು ನಿನ್ನನು ಕೊಲ್ಲುವುದಿಲ್ಲ. ಅಭಯ ಕೊಟ್ಟಿದ್ದಾರೆ. ಕರೆಯುತ್ತಾರೆ." ಎಂದು ಕೂಗಿ ಹೇಳಿದನು.

ಅಂಗರಕ್ಷಕನು ತಟಕ್ಕನೆ ಎಚ್ಚೆತ್ತು ನೆಟ್ಟಗಾಗಿ, ಮೊಣಕಾಲಿನಲ್ಲಿ ತೆವಳುತ್ತ. ಗುಹೆಯಿಂದ ಹೊರಗೆ ಬರುತ್ತ, "ಮಹಾರಾಜರ ತಲೆ ಹೋಯಿತೇ.?

ಅವನೊಂ... ರಾಜಧಾನಿಗೆ ಸಾಗಿಸ
ಇರಲಿಲ್ಲ. ಆದುದರಿಂದ ಅವನಿ...ಷ್ಟ ಕರಡಿ ಹೊರಟು
ಯಾರಿಗೂ ಧೈರ್ಯವಿಲ್ಲ, ಅವನು
ನಾಗಿರಲು ಕಾರಣವೇನೆಂದರೆ ಅವನ ಸೇನಿಲ್ಲ. ನಾಗ
ಒಬ್ಬನು
ರಗೆ

ಬೇತಾಳಕಥೆಗಳು?...

ಅಕೋ, ನಿನ್ನ ರಾಜ ಉಗ್ರದಂಡರ ಪಾದದ ಹತ್ತಿರ ಮೂರ್ಛೆ ಹೋಗಿಬಿದ್ದಿದ್ದಾರೆ! ನೀನು ಹೋಗಿ ಅಡ್ಡ ಬೀಳು." ಎಂದರು.

ಅಂಗರಕ್ಷಕನು ವಿಪರೀತ ನಡುಗುತ್ತ ರಾಕ್ಷಸನ ಮುಂದೆ ಹೋಗಿ, "ಅಯ್ಯಾ! ಧರ್ಮರಾಕ್ಷಸ ಮಹಾನುಭಾವರೇ! ಈ ಕ್ಷಣದಿಂದ ನಾನು ತಮಗೆ ಅಂಗರಕ್ಷಕ. ಆ ಭಯಂಕರ ಕರಡಿ ಮನುಷ್ಯನಿಂದ ನನ್ನನ್ನು ಕಾಪಾಡಿ!" ಎಂದನು.

ಉಗ್ರದಂಡನು ಗಟ್ಟಿಯಾಗಿ ನಕ್ಕು, "ಹಾಗಾದರೆ ನನ್ನ ರಕ್ಷಣೆಗೆ ಇವನೊಬ್ಬ ಅಂಗರಕ್ಷಕ ಸಿಕ್ಕಿದ! ಎಂಥ ಮಹಾರಾಕ್ಷಸನಿಗೆ ಎಂಥ ದುರ್ದಶೆ ಬಂದಿತು!" ಎಂದು ಹೇಳಿ, "ಎಲೋ, ಅಂಗರಕ್ಷಕಾ! ಅಗೋ ಅಲ್ಲಿ ಕಾಣುವ ನನ್ನ ಗುಹೆಯೊಳಗೆ ಹೋಗಿ ಬೇಗ ನೀರು ತೆಗೆದುಕೊಂಡು ಬಾ, ಈ ರಾಜನು ಏಳುವ ದಾರಿ ಏನಾದರಿದೆಯೋ ನೋಡಬೇಕು! ಎಷ್ಟಾದರೂ ರಾಜ ಪಾಪ!" ಎಂದನು.

"ಓಹೋ! ಈ ನಮ್ಮ ರಾಜ ಮೂರ್ಛೆಯಿಂದ ಎದ್ದರೆ ಹೊರತು, ಈ ಕರಡಿ ಮಹಾನುಭಾವರು ತಲೆ ಕಡಿಯಲಾರರೋ? ಇನ್ನೂ ಸುಮ್ಮನೆ ನೋಡುತ್ತ ಇಲ್ಲಿಯೇ ಇದ್ದಾರೋ? ನನ್ನದೇನಾದರೂ ತಪ್ಪಿದ್ದರೆ ಕ್ಷಮಿಸೀ!" ಎಂದು ಅಂಗರಕ್ಷಕ ಆಶ್ಚರ್ಯ ಭಯ ದಿಂದ ಕೈ ಮುಗಿದನು.

ಕರಡಿಕಟುಕನು ಅವನ ಮೇಲೆ ಚಪಗೊಡಲಿ ಯೆತ್ತಿ "ಏನಂದೆ? ಮೂರ್ಖಾ! ಉಗ್ರದಂಡ ರಾಕ್ಷಸ ಹೇಳಿದ್ದೇನು? ಓಡು! ಅವರು ಹೇಳಿದ ಕೆಲಸ ಮಾಡು!" ಎಂದನು.

ಆ ಕೂಡಲೇ ಅಂಗರಕ್ಷಕನು ರಾಕ್ಷಸನ ಗುಹೆಗೆ ಓಡಿಹೋಗಿ, ಅಲ್ಲಿದ್ದ ಒಂದು ಕಲ್ಲಿನ ಪಾತ್ರವನ್ನೆತ್ತಿ ಕೊಂಡು ಮಡುವಿನಿಂದ ನೀರು ತುಂಬಿಸಿಕೊಂಡು ಬಂದನು. ಬರುವಾಗ ಆ ಬದಿಯಲ್ಲಿ ನಿಂತಿದ್ದ ಸೊಂಡಿಲು ತುಂಡಾದ ಆನೆ ಅವನನ್ನು ನೋಡಿ ದೊಡ್ಡ ಧ್ವನಿಯಿಂದ ಘೀಂಕರಿಸಿ, ಅವನನ್ನು ಓಡಿಸಿ ಕೊಂಡು ಬರತೊಡಗಿತು.

ಅಂಗರಕ್ಷಕನು ನೀರಿನ ಪಾತ್ರವನ್ನು ಜಾರಬಿಟ್ಟು ಸಾಯುವಹಾಗೆ ಕೂಗುತ್ತ ಉಗ್ರದಂಡನೇ ಮೊದ ಲಾದವರ ಬಳಿಗೆ ಓಡೋಡಿಬಂದು, "ಅಯ್ಯಾ! ಕರಡಿ ಮಹಾನುಭಾವರ ಮೊಂಡು ಸೊಂಡಿಲಿನ ಆನೆ ನನ್ನನ್ನು ಓಡಿಸಿಕೊಂಡು ಬರುತ್ತಿದೆ. ರಕ್ಷಿಸಿ!" ಎಂದು ಕೂಗಿದನು.

"ಆಹಾ ನನ್ನ ವಾಹನ ಇಲ್ಲೇ ಇದೆ ಎಂದಾಯಿತು!" ಎಂದು ಕರಡಿಕಟುಕ ನಾಯಕನು ಸಂತೋಷದಿಂದ ಹಾರಿ ನಿಂತು ಆ ಕಡೆಗೆ ನೋಡುವಾಗ, ಆನೆ ಸೊಂಡಿಲೆತ್ತಿ ಕೂಗುತ್ತ ದೊಡ್ಡ ಭೂತದಂತೆ ಅವರ ಕಡೆಗೇ ಬರತೊಡಗಿತು.

